

ಕರ್ನಾಟಕ ಸರ್ಕಾರ

# ನುಡಿ ಕನ್ನಡ

## ತೃತೀಯ ಭಾಷಾ ಕನ್ನಡ ಪಠ್ಯಪುಸ್ತಕ





## ಏಳನೆಯ ತರಗತಿ

### ಮೊದಲನೆಯ ಹಾಗೂ ಎರಡನೆಯ ಸೆಮಿಸ್ಟರ್

೨೦೧೫

**ಕರ್ನಾಟಕ ಪಠ್ಯಪುಸ್ತಕ ಸಂಘ (ರಿ)**
೧೦೦ ಅಡಿ ವರ್ತುಲ ರಸ್ತೆ, ಬನಶಂಕರಿ ೩ನೆಯ ಹಂತ
ಬೆಂಗಳೂರು–೫೬೦೦೮೫

# ಪಠ್ಯಪುಸ್ತಕ ರಚನಾ ಸಮಿತಿ

**ಅಧ್ಯಕ್ಷರು**

**ಡಾ. ದಯಾವತಿ ಎಂ.,** ಪ್ರಾಂಶುಪಾಲರು, ಸ.ಪ.ಪೂ.ಕಾಲೇಜು ಲಿಂಗದಹಳ್ಳಿ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.

**ಸದಸ್ಯರು**

**ಡಾ. ಶಿವರಾಜ ಕುಲಕರ್ಣಿ,** ಪ್ರಾಚಾರ್ಯರು, ಸ.ಪ.ಪೂ ಕಾಲೇಜು, ಚಂದಾಪುರ, ಚಿಂಚೋಳಿತ ತಾ. ಕಲಬುರಗಿ ಜಿಲ್ಲೆ.

**ಇಂದ್ರಕುಮಾರ್ ಎಚ್.ಬಿ.,** ಸಹ ಶಿಕ್ಷಕ, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಕುರ್ಕಿ, ದಾವಣಗೆರೆ ತಾಲ್ಲೂಕು.

**ರಾಜೇಶ್ವರಿ ಎಂ.,** ಸಹ ಶಿಕ್ಷಕಿ ಸರ್ಕಾರಿ ಪ್ರೌಢಶಾಲೆ, ಶಿವನಸಂದ್ರ, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ.

**ಹರೀಶ ಬಿ.ಎಂ.,** ಸಹ ಶಿಕ್ಷಕ, ಸರ್ದಾರ್ ವಲ್ಲಭಭಾಯಿ ಪಟೇಲ್ ಪ್ರೌಢಶಾಲೆ, ಸರ್ಜಾಪುರ, ಆನೇಕಲ್ ತಾಲ್ಲೂಕು.

**ಜಂಗಿ ಜಿ.ಎಂ.,** ಕಲಾಕಾರರು, ಡಿ.ಎಸ್.ಇ.ಆರ್.ಟಿ., ಬನಶಂಕರಿ 3ನೇ ಹಂತ, ಬೆಂಗಳೂರು – ೮೫

**ಪರಿಶೀಲಕರು**

**ಪ್ರಕಾಶ್ ಬೂಸನೂರ್,** ನಿವೃತ್ತ ಶಿಕ್ಷಣಾಧಿಕಾರಿಗಳು, ನಂ. 55, ನಿಜಲಿಂಗಪ್ಪ ಲೇಔಟ್, ದಾವಣಗೆರೆ–೫೭೭೦೦೪

**ಸಂಪಾದಕ ಮಂಡಳಿ ಸದಸ್ಯರು**

**ಪ್ರೊ. ಚಂದ್ರಶೇಖರ ಪಾಟೀಲ್,** ಸಾಹಿತಿಗಳು, ಸಂಕ್ರಮಣ ಪ್ರಕಾಶನ, ಎಲಚೇನಹಳ್ಳಿ, ಜೆ.ಪಿ. ನಗರ , ಬೆಂಗಳೂರು–೭೮

**ಡಾ. ಕೆ. ಮರುಳಸಿದ್ದಪ್ಪ,** ಸಾಹಿತಿಗಳು, ನಂ ೧೩೭, ೧೨ನೇ ಕ್ರಾಸ್, ಜೆ.ಪಿ. ನಗರ, ಬೆಂಗಳೂರು–೭೮

**ಪ್ರೊ. ಸಾ.ಶಿ. ಮರುಳಯ್ಯ,** ಸಾಹಿತಿಗಳು, ರಾಗಿಣಿ, ಹಂಪಿನಗರ, ಬೆಂಗಳೂರು.

**ಪ್ರೊ. ಅ.ರಾ.ಮಿತ್ರ,** ಸಾಹಿತಿಗಳು, ಕೆ.ಎಚ್.ಬಿ. ಕಾಲೋನಿ, ಯಲಹಂಕ, ಬೆಂಗಳೂರು.

**ಡಾ. ವಿಷ್ಣು ಎಂ. ಶಿಂದೆ,** ಸಹಾಯಕ ಪ್ರಾಧ್ಯಾಪಕರು, ಶಿಕ್ಷಣ ವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ಜ್ಞಾನಶಕ್ತಿ ಆವರಣ, ತೊರವಿ, ವಿಜಯಾಪುರ – ೫೮೬೧೦೮.

**ಮುಖ್ಯ ಸಂಯೋಜಕರು:**

**ಪ್ರೊ. ಜಿ.ಎಸ್.ಮುಡಂಬಡಿತ್ತಾಯ,** ಪಠ್ಯಕ್ರಮ ಪರಿಷ್ಕರಣೆ ಮತ್ತು ಪಠ್ಯ ಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೫೬೦ ೦೮೫

**ಸಲಹೆ ಮತ್ತು ಮಾರ್ಗದರ್ಶನ:**

**ಶ್ರೀ ನಾಗೇಂದ್ರ ಕುಮಾರ್,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೮೫.

**ಶ್ರೀ ಪಾಂಡುರಂಗ,** ಉಪನಿರ್ದೇಶಕರು (ಪ್ರಭಾರಿ), ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೮೫

**ಕಾರ್ಯಕ್ರಮ ಸಂಯೋಜಕರು:**

**ಶ್ರೀ ಪಾಂಡುರಂಗ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೮೫

# ಮುನ್ನುಡಿ

೨೦೦೫ನೆಯ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿನ ಆಧಾರದ ಮೇಲೆ ಕರ್ನಾಟಕ ಪಠ್ಯಪುಸ್ತಕ ಸಂಘವು ೨೦೧೦ ನೆಯ ಸಾಲಿನಿಂದ ಒಂದನೆಯ ತರಗತಿಯಿಂದ ಹತ್ತನೆಯ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು ೧೨ ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಕೋರ್ ವಿಷಯಗಳನ್ನು ೭ ಮಾಧ್ಯಮಗಳಲ್ಲಿ ರಚನೆ ಮಾಡಲಾಗುತ್ತಿದೆ. ೧ ರಿಂದ ೪ ನೆಯ ತರಗತಿಯವರೆಗೆ ಪರಿಸರ ವಿಜ್ಞಾನ, ಗಣಿತ ಮತ್ತು ೫ ರಿಂದ ೧೦ ನೆಯ ತರಗತಿಯವರೆಗೆ ಕೋರ್ ವಿಷಯಗಳಾದ ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳಿರುತ್ತವೆ.

**೨೦೦೫ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.**

- ಕಲಿಕೆಯನ್ನು ಜೀವನದ ಆವಶ್ಯಕತೆಗಳೊಂದಿಗೆ ಜೋಡಿಸುವುದು
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಆವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು
- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು
- ವಿಷಯಗಳ ಮೇರೆಗಳನ್ನು ಮೀರಿ ಅವುಗಳಿಗೆ ಸಮಗ್ರದೃಷ್ಟಿಯ ಬೋಧನೆಯನ್ನು ಅಳವಡಿಸುವುದು
- ಶಾಲೆಯ ಹೊರಗಿನ ಬದುಕಿಗೆ ಜ್ಞಾನವನ್ನು ಸಂಯೋಜಿಸುವುದು.
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು.



ನೂತನ ಪಠ್ಯಪುಸ್ತಕಗಳಲ್ಲಿ ನೂತನ ವಿಧಾನಗಳಾದ ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach) ಹಾಗೂ ಸುರುಳಿಯಾಕಾರದ ವಿಧಾನ (Spiral Approach) ಗಳನ್ನು ಅಳವಡಿಸಲಾಗಿದೆ.

ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಗಳಿಸಿಕೊಳ್ಳುವಂತೆ ಪ್ರಯತ್ನ ಮಾಡಲಾಗಿದೆ. ಪಠ್ಯಪುಸ್ತಕಗಳೊಂದಿಗೆ ಅತ್ಯಂತ ಆವಶ್ಯಕ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ ಒತ್ತು ನೀಡಲಾಗಿದೆ. ಈ ಕೌಶಲಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾ ಕೌಶಲಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಂದು ಪರಿಗಣಿಸಲು, ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗು ಸಂವಹನ ಕೌಶಲಗಳ ಸಂವರ್ಧನೆಯೇ ಕಲಿಕೆಯ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ (learning to learn) ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ (learning to do) ಯನ್ನು ವೃದ್ಧಿಮಾಡುತ್ತದೆ.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪುಸ್ತಕದ ತಯಾರಿಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ, ಶಿಕ್ಷಣ ಮಹಾವಿದ್ಯಾಲಯಗಳ ಸಿಬ್ಬಂದಿವರ್ಗದವರಿಗೆ, ಜಿಲ್ಲಾ ತರಬೇತಿ ಸಂಸ್ಥೆಗಳು, ರಾಜ್ಯ ಮಟ್ಟದ ಪಠ್ಯಪುಸ್ತಕ ಸಂಪಾದಕ ಮಂಡಳಿಯ ಸದಸ್ಯರಿಗೆ ಮತ್ತು ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ತನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕೆಲವು ಸಾಹಿತಿಗಳು ಹಾಗೂ ಕವಿಗಳ ಕೃತಿಗಳನ್ನು ಈ ಪಠ್ಯಪುಸ್ತಕಗಳಲ್ಲಿ ಅಳವಡಿಸಲಾಗಿದೆ. ಈ ವಿಚಾರದಲ್ಲಿ ತಮ್ಮ ಒಪ್ಪಿಗೆಯನ್ನು ನೀಡಿರುವ ಬರಹಗಾರರಿಗೆ ಹಾಗೂ ಕವಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಾಗಿದೆ.



**ಪ್ರೊ. ಜಿ. ಎಸ್. ಮುಡಂಬಡಿತ್ತಾಯ**
ಮುಖ್ಯ ಸಂಯೋಜಕರು
ಪಠ್ಯಪುಸ್ತಕ ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನೆ
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

**ನಾಗೇಂದ್ರ ಕುಮಾರ್**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

# ಸಮಕ್ಷಮ

ಕಾಲಕ್ಕೆ ತಕ್ಕಂತೆ ಕಲಿಯುವ ರೀತಿ, ವೇಗ ಹಾಗೂ ಪ್ರಮಾಣಗಳು ಗಣನೀಯವಾಗಿ ಬದಲಾವಣೆ ಹೊಂದುವ ನಿಟ್ಟಿನಲ್ಲಿ ಹೊಸ ಪಠ್ಯಪುಸ್ತಕಗಳು ಮಕ್ಕಳ ಕಲಿಕೆಗೆ ಅತ್ಯಗತ್ಯ. ಶಿಕ್ಷಣ ಕ್ಷೇತ್ರದಲ್ಲಿ ಹೊಸ ಸಂಶೋಧನೆಗಳು ಆದಂತೆ, ಕಲಿಯುವ ರೀತಿಯನ್ನು ಸರಳೀಕರಿಸುವ ಪ್ರಯತ್ನಗಳು ಜರುಗಿದಂತೆ ಹಾಗೂ ಮಗುವಿಗೆ ಕಲಿಕೆ ಭಿನ್ನರೀತಿಯ ಆಯಾಮಗಳಲ್ಲಿ ಉಪಯೋಗವಾಗುವಂತೆ ಪಠ್ಯವಸ್ತುವೂ ಬದಲಾಗುತ್ತಾ ಬಂದಿದೆ. ಈ ಹೊಸ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಶಿಕ್ಷಣ ನೀತಿಯನ್ವಯ ಎನ್.ಸಿ.ಎಫ್ ೨೦೦೫ ರಚಿತವಾಗಿದ್ದು, ಅದರ ಮುಖ್ಯ ತಳಹದಿಯ ಮೇಲೆ ಈ ಹೊಸ ಪಠ್ಯಪುಸ್ತಕ ಸಿದ್ಧಪಡಿಸಲಾಗಿದೆ.

ಕನ್ನಡ ಪಠ್ಯ ಪುಸ್ತಕಗಳು ಮಕ್ಕಳ ಸರ್ವತೋಮುಖ ಅಭಿವೃದ್ಧಿಗೆ ಪೂರಕವಾಗುವಂತಹವು. ಮಗುವಿನ ಸೃಜನಶೀಲತೆಯನ್ನು ಬೆಳೆಸುವಂತಹವು. ೨೦೦೫ರ ರಾಷ್ಟ್ರೀಯ ಶಾಲಾ ಪಠ್ಯಕ್ರಮದ ಚೌಕಟ್ಟಿನ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಶಿಕ್ಷಣ ಕ್ಷೇತ್ರದಲ್ಲಿ ತ್ರಿಭಾಷಾ ಸೂತ್ರವನ್ನು ಜಾರಿಗೊಳಿಸಿರುವ ಕಾರಣ ಕನ್ನಡೇತರ ಭಾಷಿಕರು ಕನ್ನಡವನ್ನು ದ್ವಿತೀಯ ಅಥವಾ ತೃತೀಯ ಭಾಷೆಯನ್ನಾಗಿ ಕಲಿಯಲು ತೃತೀಯ ಭಾಷೆಯ ಪಠ್ಯಪುಸ್ತಕ ಅವಶ್ಯಕವಾಗಿವೆ.



ತೃತೀಯ ಭಾಷೆಯ ಈ ಹೊಸ ಪಠ್ಯಪುಸ್ತಕದಲ್ಲಿ ಶಿಶು ಕೇಂದ್ರಿತ ಅಂಶಗಳೇ ಮುಖ್ಯವಾಗಿದ್ದು ಮಕ್ಕಳು ಸಮಾಜದಲ್ಲಿ ಯಶಸ್ವಿಯಾಗಿ ಬದುಕಲು ಮಾಡುವಲ್ಲಿ ಸಹಕಾರಿಯಾಗಿದೆ. ಈ ತರಗತಿಯ ಮಕ್ಕಳ ವಯೋಮಾನ, ಮಾನಸಿಕ ಹಂತವನ್ನು ಪರಿಗಣಿಸಿ ಅತಿ ಸರಳವೂ ಅತಿ ಹೊರೆಯೂ ಆಗದಂತೆ ಪಠ್ಯವನ್ನು ರಚಿಸಲಾಗಿದೆ. ಗದ್ಯ, ಪದ್ಯ, ಸಂಭಾಷಣೆ, ನಾಟಕ, ಕಥೆ.. ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಆಯ್ಕೆ ಮಾಡಿಕೊಂಡು ಮಗುವಿನ ಸೃಜನಶೀಲತೆ ಹೆಚ್ಚಿಸುವಂತಹ ಆಸಕ್ತಿಯನ್ನು ಕೆರಳಿಸುವಂತಹ ಹೊಸಚಿಂತನೆಯೆಡೆ ಒಯ್ಯುವಂತಹ ಪ್ರಯತ್ನಗಳನ್ನು ಮಾಡಲಾಗಿದೆ. ಭಾಷೆಯ ಕಲಿಕೆ ಯಶಸ್ವಿಯಾಗಲು ಹೊಸರೀತಿಯ ಅಭ್ಯಾಸಗಳನ್ನು ಅಳವಡಿಸಿಕೊಳ್ಳಲಾಗಿದೆ.

ನಿಗದಿಪಡಿಸಿದ ಸಾಮರ್ಥ್ಯಗಳ ಪೂರೈಕೆಗಾಗಿ ವೈವಿಧ್ಯಮಯ ವಿಷಯ–ವಸ್ತುಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ. ನಾಡು ನುಡಿಯ ಬಗ್ಗೆ ಪ್ರೀತಿ, ದೇಶಾಭಿಮಾನ, ವಾತ್ಸಲ್ಯ, ಕರುಣೆ.. ಮುಂತಾದ ಮೌಲ್ಯಗಳ ಬೆಳವಣಿಗೆಯ ಕಡೆಗೂ ಗಮನಹರಿಸಲಾಗಿದೆ.

ಈ ಪಠ್ಯಪುಸ್ತಕದ ರಚನಾ ಸಮಿತಿಯ ಸದಸ್ಯರಿಗೆ, ಪರಿಶೀಲಕರಿಗೆ, ಕಲಾಕಾರರಿಗೆ, ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಅಧಿಕಾರಿ ವರ್ಗದವರಿಗೆ ನನ್ನ ಕೃತಜ್ಞತೆಗಳು. ಈ ಹೊಸ ಪುಸ್ತಕದ ಪ್ರಯತ್ನ ಎಲ್ಲರಿಗೂ ಇಷ್ಟವಾಗುತ್ತದೆಂದು ಹಾಗೂ ಸ್ಪಷ್ಟವಾದ ಕಲಿಕೆಗೆ ಪೂರಕವಾಗುತ್ತದೆಂದು ನಂಬಿದ್ದೇವೆ.

**ಡಾ. ದಯಾವತಿ ಎಂ.**
ಅಧ್ಯಕ್ಷರು
ನುಡಿ ಕನ್ನಡ – ೭ ಪಠ್ಯಪುಸ್ತಕ ರಚನಾ ಸಮಿತಿ

## ಪರಿವಿಡಿ

## ಮೊದಲನೆಯ ಸೆಮಿಸ್ಟರ್



## ಎರಡನೆಯ ಸೆಮಿಸ್ಟರ್

## ಪದ್ಯಪಾಠ – ೧

# ಕೂಸುಮರಿ

**ಪ್ರವೇಶಕ್ಕೂ ಮುನ್ನ...**

ನೀವು ಅನೇಕ ಆಟಗಳನ್ನು ಆಡಿದ್ದೀರಿ ಅಲ್ಲವೇ? ಬಾಲ್ಯದ ಆಟಗಳ ಸ್ಮರಣೆ ನಿಮಗಿದೆ. ಮಕ್ಕಳೊಂದಿಗೆ ಆಡಿದ ಆಟದ ಒಂದು ಸನ್ನಿವೇಶ ಇಲ್ಲಿದೆ.

ಕೂಸುಮರಿ! ಕೂಸುಮರಿ
ಕೂಸುಮರಿ ಬೇಕೇ ಕೂಸುಮರಿ

ಅಣ್ಣನ ಬೆನ್ನಿಗೆ ಮೈಯನು ಬೆಸೆದು
ಕತ್ತಿನ ಸುತ್ತಲು ಕೈಗಳನೆಸೆದು
ಸೊಂಟದ ಸುತ್ತಲು ಕಾಲನು ಬಿಗಿದು
ಅಣ್ಣನು ನೆಗೆದರೆ ತಾನೂ ನೆಗೆದು



ಮುದ್ದಾಗಿರುವುದು ಕೂಸುಮರಿ!
ಕನ್ನಡ ನಾಡಿನ ಕೂಸುಮರಿ!
ಕೂಸುಮರಿ! ಕೂಸುಮರಿ!
ಕೂಸುಮರಿ ಬೇಕೇ ಕೂಸುಮರಿ

ಕೆದರಿದ ಕೂದಲ ಮರೆಯಿಂದಿಣಿಕಿ
ಐ! ಐ! ಎನ್ನುತ ಕಾಡುತ ಕೆಣಕಿ
ಬೆಳಗಿನ ಜಾವದ ಕತ್ತಲೆಯಲ್ಲಿ
ಎಳೆ ಬಿಸಿಲೆರಚುವ ಸೂರ್ಯನ ಹೋಲಿ

ಮುದ್ದಾಗಿರುವುದು ಕೂಸುಮರಿ!
ಕನ್ನಡ ನಾಡಿನ ಕೂಸುಮರಿ!
ಕೂಸುಮರಿ! ಕೂಸುಮರಿ!
ಕೂಸುಮರಿ ಬೇಕೇ ಕೂಸುಮರಿ!

ಭೂಮಿಯ ಬಲೆಯಿಂದಾಕಾಶಕ್ಕೆ
ಸರ್ರೆಂದೇರುತ ಬಣ್ಣದ ರೆಕ್ಕೆ
ಹರಡುತ ಹಾಡುವ ಹಕ್ಕಿಯ ಹಾಗೆ
ಹರಡುತಲಿರುವುದು ಬೆನ್ನಿನ ಮೇಗೆ

ಕನ್ನಡ ನಾಡಿನ ಕೂಸುಮರಿ!
ಕೂಸುಮರಿ ಬೇಕೇ ಕೂಸುಮರಿ!

– ಜಿ.ಪಿ.ರಾಜರತ್ನಂ

**ಕ್ಷೇತ್ರ :** ಆಲಿಸುವುದು

**ಸಾಮರ್ಥ್ಯ :** ಬಳಕೆಯಲ್ಲಿರದ ಗೀತೆ, ಕಥನ, ಒಗಟು ಮತ್ತು ಪರಿಚಿತ ಸನ್ನಿವೇಶಗಳಲ್ಲಿನ ಸರಳ ವಿವರಣೆಗಳನ್ನು ಆಲಿಸಿ ಅರ್ಥ ಮಾಡಿಕೊಳ್ಳುವುದು.

## ಕವಿ ಕೃತಿ ಪರಿಚಯ



'ಬಣ್ಣದ ತಗಡಿನ ತುತ್ತೂರಿ' ಮೊದಲಾದ ಪದ್ಯಗಳ ಮೂಲಕ ಚಿಕ್ಕಮಕ್ಕಳಿಗೂ ಚಿರಪರಿಚಿತರಾದವರು ಜಿ.ಪಿ.ರಾಜರತ್ನಂ. ಇವರ ಪೂರ್ಣ ಹೆಸರು ಗುಂಡ್ಲು ಪಂಡಿತ ರಾಜರತ್ನಂ. ೧೯೦೮ರಲ್ಲಿ ಜನಿಸಿದ ಇವರು, 'ರತ್ನನ ಪದಗಳು', 'ನಾಗನ ಪದಗಳು', 'ಪುರುಷ ಸರಸ್ವತಿ' ಮುಂತಾದ ಕವನ ಸಂಗ್ರಹಗಳನ್ನು 'ಗಂಡುಗೊಡಲಿ', 'ನರಕದ ನ್ಯಾಯ' ಮೊದಲಾದ ನಾಟಕಗಳನ್ನು ರಚಿಸಿದ್ದಾರೆ. 'ಕಂದನ ಕಾವ್ಯಮಾಲೆ', 'ತುತ್ತೂರಿ', 'ರಸಕವಳ' ಮುಂತಾದ ಮಕ್ಕಳ ಸಾಹಿತ್ಯ ರಚಿಸಿದ್ದಾರೆ. ದೆಹಲಿಯಲ್ಲಿ ೧೯೭೮ರಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.



## ಓದಿ ತಿಳಿಯಿರಿ

ಬೆಸೆ – ಕೂಡಿಸು, ಜೋಡಿಸು; ಕತ್ತು – ಕುತ್ತಿಗೆ, ಕೊರಳು; ಬಿಗಿ – ಹಿಡಿತ, ಸುತ್ತಿಕೋ; ನೆಗೆ – ಜಿಗಿ, ಹಾರು; ಕೆದರಿದ – ಹರಡಿದ; ಮರೆ – ಹಿಂದಿನಿಂದ; ಕೆಣಕಿ – ಸಿಟ್ಟಿಗೇಳುವಂತೆ ಮಾಡು; ಕಾಡು– ಪೀಡಿಸು; ಜಾವ – ಸಮಯ, ಹೊತ್ತು; ಮೇಗೆ – ಮೇಲೆ; ಹೋಲಿ – ಹೋಳಿ, ರಂಗಿನ ಆಟ.

## ಗಮನಿಸಿ ತಿಳಿಯಿರಿ

**ಕೂಸುಮರಿ** – ಆಟವಾಡಿಸಲು ಚಿಕ್ಕ ಮಗುವನ್ನು ಬೆನ್ನಿನ ಮೇಲೆ ಹೊರುವುದು.

**ಸರ್ರೆಂದೇರುತ** – ಸರ್ ಎನ್ನುವ ಶಬ್ದದೊಂದಿಗೆ ಹತ್ತುತ್ತ.

## ಅಭ್ಯಾಸ

**ಅ) ಬಿಟ್ಟಿರುವ ಖಾಲಿ ಜಾಗಗಳಲ್ಲಿ ಸೂಕ್ತವಾದ ಪದಗಳಿಂದ ಭರ್ತಿ ಮಾಡಿರಿ.**

೧. ಅಣ್ಣನ ಬೆನ್ನಿಗೆ ________________ ಬೆಸೆದು

೨. ಎಳೆ ________________ ಸೂರ್ಯನ ಹೋಲಿ

೩. ಹರಡುತ ಹಾಡುವ ________________ ಹಾಗೆ

೪. ಕನ್ನಡ ನಾಡಿನ ________________ !

**ಆ) "ಅ" ಪಟ್ಟಿಯಲ್ಲಿರುವ ಪದ್ಯದ ಸಾಲುಗಳನ್ನು "ಬ" ಪಟ್ಟಿಯಲ್ಲಿರುವ ಸಾಲುಗಳೊಂದಿಗೆ ಕ್ರಮವಾಗಿ ಹೊಂದಿಸಿ ಬರೆಯಿರಿ.**

| "ಅ" | "ಬ" | |
|---|---|---|
| ೧. ಐ! ಐ! ಎನ್ನುತ | ಅ. ಕಾಲನು ಬಿಗಿದು | ____________ |
| ೨. ಕೆದರಿದ ಕೂದಲ | ಆ. ಕಾಡುತ ಕೆಣಕಿ | ____________ |
| ೩. ಹರಡುತಲಿರುವುದು | ಇ. ಬೆನ್ನಿನ ಮೇಗೆ | ____________ |
| ೪. ಕತ್ತಿನ ಸುತ್ತಲು | ಈ. ಮರೆಯಿಂದಿಣಿಕಿ | ____________ |
| | ಉ. ಕೈಗಳನೆಸೆದು | ____________ |



**ಇ) ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಅಣ್ಣನು ನೆಗೆದರೆ ಕೂಸುಮರಿ ಏನು ಮಾಡುತ್ತದೆ?

________________________________

೨. ಎಳೆ ಬಿಸಿಲನ್ನು ಎರಚುವವರು ಯಾರು?

________________________________

೩. ಕೂಸುಮರಿಯು ಭೂಮಿಯ ಬಲೆಯಿಂದ ಎಲ್ಲಿಗೆ ಏರುವುದು?

________________________________

೪. ಕೂಸುಮರಿ ಪದ್ಯವನ್ನು ಬರೆದ ಕವಿಯ ಹೆಸರೇನು?

______________________________

೫. ಈ ಪದ್ಯದ ಯಾವ ಸಾಲು ನಿಮಗೆ ಇಷ್ಟವಾಯಿತು?

______________________________

**ಈ) ಈ ಪದ್ಯ ಭಾಗದಲ್ಲಿರುವ ಪ್ರಾಸ ಪದಗಳನ್ನು ಗುರುತಿಸಿ ಬರೆಯಿರಿ.**

ಅಣ್ಣನ ಬೆನ್ನಿಗೆ ಮೈಯನು ಬೆಸೆದು
ಕತ್ತಿನ ಸುತ್ತಲು ಕೈಗಳನೆಸೆದು
ಸೊಂಟದ ಸುತ್ತಲು ಕಾಲನು ಬಿಗಿದು
ಅಣ್ಣನು ನೆಗೆದರೆ ತಾನೂ ನೆಗೆದು

______________ ______________

______________ ______________

______________ ______________

______________ ______________



**ಉ) ಶಿಕ್ಷಕರ ನೆರವಿನಿಂದ ಈ ಪದ್ಯದ ಭಾವಾರ್ಥವನ್ನು ಬರೆಯಿರಿ.**

______________________________

______________________________

______________________________

______________________________

______________________________

______________________________

______________________________

______________________________

______________________________

## ಸಾಮರ್ಥ್ಯ ಆಧಾರಿತ ಅಭ್ಯಾಸ

### ಅ) ಈ ಒಗಟುಗಳನ್ನು ಬಿಡಿಸಿ.

೧. ಚೋಟುದ್ದ ಹುಡುಗಿಗೆ ಮಾರುದ್ದ ಜಡೆ ______

೨. ಚಚ್ಚೌಕ ಬಾವಿ, ಬಗ್ಗಿ ನೋಡಿದರೆ ಹನಿ ನೀರಿಲ್ಲ! ______

೩. ಅಕ್ಕ ಅಕ್ಕ ಗಿಡ ನೋಡಾ, ಗಿಡದ ತುಂಬಾ ಕಾಯಿ ನೋಡಾ ______

೪. ಕೈಯುಂಟು ಕಾಲಿಲ್ಲ ಶಿರಹರಿದ ಮುಂಡ, ರೊಯ್ಯ ರೊಯ್ಯನೆ ಬಂದು ಹೆಗಲೇರಿಕೊಂಡ, ರಾಯರಾಯರಿಗೆ ತಾನೇ ಪ್ರಚಂಡ ______

೫. ಹಸಿರು ಗಿಡದಲ್ಲಿ ಮೊಸರು ಚೆಲ್ಲಿದೆ ______

### ಆ) ಈ ಉತ್ತರಗಳು ಬರುವಂತೆ ಒಗಟುಗಳನ್ನು ಬರೆಯಿರಿ / ರಚಿಸಿರಿ.



೧. ಆಕಾಶ, ನಕ್ಷತ್ರ

______

೨. ತೆಂಗಿನ ಮರ

______

೩. ಬಾಳೆಹಣ್ಣು

______

೪. ಬೆಳ್ಳುಳ್ಳಿ

______

### ಇ) ಈ ವಾಕ್ಯಗಳಲ್ಲಿ ಕೆಳಗೆರೆ ಎಳೆದ ಪದಗಳನ್ನು ಗಮನಿಸಿರಿ.

೧. ರಾಜು ಹೊಸ ಬಟ್ಟೆ ಬೇಕು ಎಂದು ತನ್ನ ತಾಯಿಯನ್ನು <u>ಕಾಡತೊಡಗಿದನು.</u>

೨. ಸುಮಾ ತನ್ನ ತಂದೆಯ ಜೊತೆ <u>ಕಾಡನ್ನು</u> ನೋಡಲು ಹೋದಳು.

***ಇಲ್ಲಿ 'ಕಾಡು' ಎನ್ನುವ ಪದಕ್ಕೆ ಎರಡೂ ವಾಕ್ಯಗಳಲ್ಲಿ ಬೇರೆ ಬೇರೆ ಅರ್ಥ ಇದೆ. ಇದೇ ರೀತಿಯ ಪದಗಳನ್ನು ಸ್ಮರಿಸಿ ಪ್ರತ್ಯೇಕ ವಾಕ್ಯಗಳನ್ನು ರಚಿಸಿ.***

೧. ______

೨. ______

೧. ______________________________

೨. ______________________________

**ಈ) ಈ ಕೆಳಗಿನ ಪದಗಳ ರಚನೆಯನ್ನು ಗಮನಿಸಿ. ಅದೇ ತರಹದ ಪದಗಳನ್ನು ಹುಡುಕಿ ಬರೆಯಿರಿ.**

೧. ಸರ್‍ರೆಂದೇರುತ – ಸರ್ರ್ ಎಂದು ಏರುತ

೨. ______________________________

೩. ______________________________

೪. ______________________________

## ಭಾಷಾ ಚಟುವಟಿಕೆ

**ಅ) ಈ ಪದ್ಯದಲ್ಲಿನ ಹಲವಾರು ಪದಗಳು ಕೂಡಿಕೊಂಡಿವೆ. ಅವುಗಳ ಸರಳ ರೂಪ ಗಮನಿಸಿ.**

೧. ಕೈಗಳನ್ನು ಎಸೆದು – ಕೈಗಳನೆಸೆದು

೨. ಬಿಸಿಲನ್ನು ಎರಚುವ – ಬಿಸಿಲನೆರಚುವ

೩. ಮರೆಯಿಂದ ಇಣುಕಿ – ಮರೆಯಿಂದಿಣುಕಿ

೪. ಬಲೆಯಿಂದ ಆಕಾಶಕ್ಕೆ – ಬಲೆಯಿಂದಾಕಾಶಕ್ಕೆ

೫. ಹರಡುತಲಿ ಇರುವುದು – ಹರಡುತಲಿರುವುದು

## ಅಭ್ಯಾಸ ಚಟುವಟಿಕೆ

ಅ) ಕೂಸುಮರಿ ಆಟದಂತೆ ನಿಮಗೆ ಗೊತ್ತಿರುವ ಇತರೆ ಆಟಗಳ ಬಗ್ಗೆ ಮಾಹಿತಿ ಸಂಗ್ರಹಿಸಿರಿ.

ಆ) ಜಿ.ಪಿ.ರಾಜರತ್ನಂ ಅವರ ಇತರ ಪದ್ಯಗಳನ್ನು ಸಂಗ್ರಹಿಸಿ ಓದಿರಿ.



## ವ್ಯಾಕರಣಾಂಶ

ಈ ಹಿಂದಿನ ತರಗತಿಯಲ್ಲಿ ಕನ್ನಡ ವರ್ಣಮಾಲೆಯ ಬಗ್ಗೆ ತಿಳಿದುಕೊಂಡಿದ್ದೀರಲ್ಲವೇ?
(ಅದಕ್ಕೆ ಸಂಬಂಧಿಸಿದಂತೆ ಕೆಲವು ಪ್ರಶ್ನೆಗಳು)

**ಅ. ಈ ಹೇಳಿಕೆಗಳಿಗೆ ಸರಿ ಹೊಂದುವ ಸೂಕ್ತ ಉತ್ತರವನ್ನು ಗುರುತಿಸಿ.**

೧. ಕನ್ನಡ ವರ್ಣಮಾಲೆಯಲ್ಲಿ ಎಷ್ಟು ಅಕ್ಷರಗಳಿವೆ?
ಅ. ನಲವತ್ತು ಆ. ಇಪ್ಪತ್ತಾರು ಇ. ಅರವತ್ತು ಈ. ನಲವತ್ತೊಂಬತ್ತು.

೨. ಅ. ಇ, ಉ, ಋ, ಎ ಇವು
ಅ. ವ್ಯಂಜನಗಳು ಆ. ಸ್ವರಗಳು
ಇ. ಅನುನಾಸಿಕಗಳು ಈ. ಯೋಗವಾಹಗಳು

೩. ಹ್ರಸ್ವಸ್ವರಕ್ಕೆ ಉದಾಹರಣೆ
ಅ. ಈ ಆ. ಇ ಇ. ಖ್ ಈ. ಜ

**ಆ. ಹ್ರಸ್ವಸ್ವರ ಹಾಗೂ ದೀರ್ಘಸ್ವರ**

ಒಂದು ಮಾತ್ರಾ ಕಾಲದಲ್ಲಿ ಉಚ್ಚರಿಸುವ ಅಕ್ಷರಗಳನ್ನು **ಹ್ರಸ್ವಸ್ವರ** ಎನ್ನುವರು.
ಉದಾಹರಣೆ : ಅ, ಇ, ಉ, ಋ, ಎ, ಒ

ಎರಡು ಮಾತ್ರಾ ಕಾಲದಲ್ಲಿ ಉಚ್ಚರಿಸುವ ಅಕ್ಷರಗಳನ್ನು **ದೀರ್ಘಸ್ವರ** ಎನ್ನುವರು.
ಉದಾಹರಣೆ : ಆ, ಈ, ಊ, ಏ, ಐ, ಓ, ಔ

**ಇ. ಈ ಕೆಳಗಿನ ಹ್ರಸ್ವಸ್ವರ ಹಾಗೂ ದೀರ್ಘಸ್ವರ ಅಕ್ಷರಗಳನ್ನು ವಿಂಗಡಿಸಿ ಬರೆಯಿರಿ.**

ಅ, ಆ, ಇ, ಈ, ಉ, ಊ, ಋ, ಎ, ಏ, ಐ, ಒ, ಓ, ಔ

| ಹ್ರಸ್ವಸ್ವರಗಳು | ದೀರ್ಘಸ್ವರಗಳು |
|---|---|
| ______________ | ______________ |
| ______________ | ______________ |
| ______________ | ______________ |

**ಈ. ಸ್ವರದ ಸಹಾಯದಿಂದ ಉಚ್ಚರಿಸಲ್ಪಡುವ ಅಕ್ಷರಗಳು–ವ್ಯಂಜನಗಳು.**

ಈ ಕೆಳಗಿನ ಪದಗಳ ವರ್ಗೀಯ ವ್ಯಂಜನಗಳನ್ನು ಗುರುತಿಸಿ.

ಹೇಳಿಕೆ, ದೆಹಲಿ, ಸಮಯ, ನೂರಾರು.

## ಪೂರಕ ಪಾಠ

# ಧೈರ್ಯಶಾಲಿ ಬಾಲಕ

ಉತ್ತರ ಪ್ರದೇಶದ ಹನ್ನೊಂದು ವರ್ಷದ ಓಂಪ್ರಕಾಶ್ ಯಾದವ್ ಎಂಬ ಬಾಲಕ ಸೆಪ್ಟೆಂಬರ್ ನಾಲ್ಕನೇ ತಾರೀಖು, ೨೦೧೦ನೆಯ ಇಸವಿಯಂದು ತನ್ನ ಗೆಳೆಯರ ಜೊತೆ ವ್ಯಾನಿನಲ್ಲಿ ಶಾಲೆಗೆ ಹೋಗುತ್ತಿದ್ದ. ಇದ್ದಕ್ಕಿದ್ದಂತೆ ವ್ಯಾನಿನ ಗ್ಯಾಸ್‌ಕಿಟ್‌ನಲ್ಲಿ ಶಾರ್ಟ್ ಸರ್ಕ್ಯೂಟ್ ಆಗಿ ಬೆಂಕಿ ಹೊತ್ತಿಕೊಂಡು ಇಡೀ ವ್ಯಾನಿಗೆ ವ್ಯಾಪಿಸಿತು. ವ್ಯಾನ್ ಚಾಲಕ ತಕ್ಷಣವೇ ತನ್ನ ಬಳಿ ಇದ್ದ ಬಾಗಿಲು ತೆರೆದು ಓಡಿಹೋದ. ಅವನ ಪಕ್ಕದಲ್ಲೇ ಇದ್ದ ಓಂಪ್ರಕಾಶ್ ಯಾದವ್ ಓಡಿಹೋಗಲಿಲ್ಲ. ವ್ಯಾನಿನ ಹಿಂಭಾಗದಲ್ಲಿದ್ದ ಮಕ್ಕಳಿಗೆ ಹೊರಬರಲಾಗದೇ ವ್ಯಾನ್ ಡೋರ್ ಲಾಕ್ ಆಗಿತ್ತು. ಎಲ್ಲ ಮಕ್ಕಳೂ ಜೋರಾಗಿ ಅಳುತ್ತ, ಕೂಗುತ್ತ, ಹೊರಗೆ ಹೋಗಲಾರದೆ ಒದ್ದಾಡತೊಡಗಿದರು. ಬೆಂಕಿಯ ಜ್ವಾಲೆ ಜೋರಾಗುತ್ತಲಿತ್ತು. ಪ್ರಕಾಶ್ ತಕ್ಷಣವೇ ಹಿಂಭಾಗದ ವ್ಯಾನ್ ಡೋರ್ ಒಡೆದು ತೆರೆದ. ತನ್ನ ಮೈಗೂ ಹತ್ತಿದ್ದ ಬೆಂಕಿಯ ಜ್ವಾಲೆಯನ್ನೂ ಲೆಕ್ಕಿಸದೆ ಒಬ್ಬೊಬ್ಬರಾಗಿ ತನ್ನ ಗೆಳೆಯರನ್ನು ಎಳೆದುಕೊಂಡು ಅವರನ್ನು ಬದುಕಿಸಿದ.

ಹನ್ನೊಂದು ವರ್ಷ ವಯಸ್ಸಿನ ಪ್ರಕಾಶ್ ಯಾದವ್ ಎಂಟು ಮಕ್ಕಳ ಜೀವ ಉಳಿಸಿದ್ದ. ಇದು ಸತ್ಯ ಘಟನೆ. ಅವನಿಗೆ ಉತ್ತರ ಪ್ರದೇಶ ಸರ್ಕಾರ ಸಂಜಯ್ ಛೋಪ್ರಾ ಪ್ರಶಸ್ತಿ ನೀಡಿ ಗೌರವಿಸಿತು.



**ಈ ಪ್ರಶ್ನೆಗಳಿಗೆ ಉತ್ತರಿಸಿ**

೧. ಓಂಪ್ರಕಾಶ್ ಯಾದವ್ ತನ್ನ ಗೆಳೆಯರ ಜೊತೆ ಎಲ್ಲಿಗೆ ಹೋಗುತ್ತಿದ್ದ?
೨. ವ್ಯಾನಿಗೆ ಬೆಂಕಿ ಏಕೆ ಹೊತ್ತಿಕೊಂಡಿತ್ತು?
೩. ವ್ಯಾನಿನ ಹಿಂಭಾಗದಲ್ಲಿದ್ದ ಮಕ್ಕಳಿಗೆ ಏಕೆ ತಕ್ಷಣ ಹೊರಬರಲಾಗಲಿಲ್ಲ?
೪. ಓಂಪ್ರಕಾಶ್ ಯಾದವ್ ಎಷ್ಟು ಮಕ್ಕಳ ಪ್ರಾಣ ಉಳಿಸಿದ?
೫. ಸಾಹಸಿ ಪ್ರಕಾಶ್ ಯಾದವ ಎಷ್ಟು ವರ್ಷದ ಬಾಲಕನಾಗಿದ್ದನು?
೬. ಚಾಲಕನಂತೆಯೇ ಓಂಪ್ರಕಾಶ್ ಯಾದವ್ ಏಕೆ ಓಡಿ ಹೋಗಲಿಲ್ಲ?
೭. ಈ ದುರ್ಘಟನೆಯಲ್ಲಿ ನೀವು ಇದ್ದಿದ್ದರೆ ಏನು ಮಾಡುತ್ತಿದ್ದಿರಿ?

**ಚಟುವಟಿಕೆ**

ಪರೋಪಕಾರದ ಇಂತಹ ನೈಜ ಘಟನೆಗಳನ್ನು ಶಿಕ್ಷಕರಿಂದ ಕೇಳಿ ತಿಳಿಯಿರಿ.

ಗದ್ಯಪಾಠ – ೨

# ಹೊರ ಸಂಚಾರ

**ಪ್ರವೇಶಕ್ಕೂ ಮುನ್ನ...**

ನೀವು ಎಂದಾದರೂ ಹೊರಸಂಚಾರ ಹೋಗಿದ್ದೀರಾ? ನಿಮ್ಮ ಶಿಕ್ಷಕರ ಜೊತೆ ಹೊರಸಂಚಾರ ಹೋಗಿದ್ದ ಅನುಭವ ಹೇಗಿತ್ತು? ಅಲ್ಲಿ ಕಂಡ ದೃಶ್ಯಗಳು, ಸ್ನೇಹಿತರೊಂದಿಗೆ, ಶಿಕ್ಷಕರೊಂದಿಗೆ ನಡೆಸಿದ ಸಂಭಾಷಣೆಗಳು ನೆನಪಾಗುವುದಿಲ್ಲವೇ? ಶಾಲೆಯಿಂದ ಹೊರಸಂಚಾರ ಹೊರಟ ಮಕ್ಕಳು ಏನೇನು ನೋಡಿ ತಿಳಿದುಕೊಂಡರೆಂಬುದನ್ನು ಗಮನಿಸೋಣವೇ?

ಶಾಲೆಯ ಘಂಟೆ ಬಾರಿಸಿತು. ಪ್ರಾರ್ಥನೆ ಮಾಡಿದ ವಿದ್ಯಾರ್ಥಿಗಳು ಶಿಸ್ತಿನಿಂದ ಸಾಲಾಗಿ ನಡೆಯುತ್ತ ತಮ್ಮ ತರಗತಿಗಳಿಗೆ ಹೋದರು. ಏಳನೆಯ ತರಗತಿಯೊಳಗೆ ಶಿಕ್ಷಕರು ಆಗಮಿಸಿದರು.

**ಮಕ್ಕಳು** : ನಮಸ್ಕಾರ ಸರ್.

**ಶಿಕ್ಷಕರು** : ನಮಸ್ಕಾರ ಮಕ್ಕಳೇ, ಕುಳಿತುಕೊಳ್ಳಿ.

**ಶ್ರೇಯಸ್** : ಸರ್ ಇಂದು ಹೊರಸಂಚಾರಕ್ಕೆ ಹೋಗೋಣ ಅಂತಾ ಹೇಳಿದ್ರಲ್ಲ. ನಾವೆಲ್ಲ ರೆಡಿಯಾಗಿ ಬಂದಿದ್ದೀವಿ ಸರ್!

**ಶಿಕ್ಷಕರು** : ಹೌದು ಶ್ರೇಯಸ್ ನೆನಪಿದೆ. ಹಾಜರಿ ತೆಗೆದುಕೊಂಡ ನಂತರ ಹೊರಡೋಣ.

**ಮಕ್ಕಳು** : (ಸಂತೋಷದಿಂದ) ಆಯ್ತು ಸರ್!

*(ಶಿಕ್ಷಕರು ಎಲ್ಲರ ಹೆಸರನ್ನು ಕರೆದು ಹಾಜರಿ ಪುಸ್ತಕದಲ್ಲಿ ಹಾಜರಿ ನಮೂದಿಸುತ್ತಾರೆ.)*

**ಶಿಕ್ಷಕರು** : ಇಂದು ಒಬ್ಬರೂ ಶಾಲೆ ತಪ್ಪಿಸಿಲ್ಲ. ಎಲ್ಲರೂ ಹಾಜರಿದ್ದೀರಿ! ತುಂಬಾ ಸಂತೋಷ. ಮಕ್ಕಳೇ ಹೆಚ್ಚು ಗದ್ದಲ ಮಾಡಬೇಡಿ. ನಿಮ್ಮ ನಿಮ್ಮ ವಸ್ತುಗಳೊಂದಿಗೆ ನಿಧಾನವಾಗಿ ಹೊರಡಿ. ಜೊತೆಗೆ ಪೆನ್ನು, ಪುಸ್ತಕ ಕೊಂಡೊಯ್ಯುವುದನ್ನು ಮರೆಯಬೇಡಿ. ನಾನು ಹೇಳಿದ್ದ ಸೂಚನೆಗಳೆಲ್ಲವೂ ನೆನಪಿನಲ್ಲಿರಲಿ.

*(ಶಿಕ್ಷಕರ ಮಾರ್ಗದರ್ಶನದಲ್ಲಿ ಎಲ್ಲ ವಿದ್ಯಾರ್ಥಿಗಳು ಎಚ್ಚರಿಕೆಯಿಂದ ಮುಂದೆ ಸಾಗುವರು)*

**ರಹೀಮ** : (ಹುತ್ತವನ್ನು ತೋರಿಸುತ್ತಾ) ಸರ್, ಇಲ್ಲಿ ನೋಡಿ! ಎಷ್ಟು ದೊಡ್ಡ ಹುತ್ತ ಇದೆ ಇಲ್ಲಿ ! ಇದನ್ನು ಹಾವು ಹೇಗೆ ಕಟ್ಟಿರಬಹುದು?





**ಶಿಕ್ಷಕರು** : ಹುತ್ತವನ್ನು ಮಣ್ಣಿನಲ್ಲಿರುವ ಗೆದ್ದಲು ಹುಳುಗಳು ಕಟ್ಟುತ್ತವೆ. ಅವುಗಳನ್ನು ತಿನ್ನಲು ಬಂದ ಹಾವು ಆ ಹುತ್ತದಲ್ಲಿ ವಾಸಿಸುತ್ತದೆ. ಬಹಳಷ್ಟು ಜನ ಇಂದಿಗೂ ಹುತ್ತವನ್ನು ಹಾವುಗಳು ಕಟ್ಟುತ್ತವೆಂದು ತಪ್ಪಾಗಿ ನಂಬಿದ್ದಾರೆ.

(ಮಕ್ಕಳು ಶಿಕ್ಷಕರ ವಿವರಣೆ ಕೇಳಿ ಇನ್ನಷ್ಟು ಅಚ್ಚರಿಯಿಂದ ಆ ಹುತ್ತವನ್ನು ಗಮನಿಸಿ ಮುಂದುವರೆಯುತ್ತಾರೆ)

**ಸಹನಾ** : ಸರ್, ಆ ಮರದಲ್ಲಿನ ಗೂಡುಗಳು ಎಷ್ಟು ಚೆನ್ನಾಗಿವೆ. ಯಾವ ಪಕ್ಷಿ ಈ ತರಹದ ಗೂಡನ್ನು ಕಟ್ಟುತ್ತದೆ ಸರ್?

**ತೇಜಸ್** : ಸರ್ ನಾನು ಹೇಳಲಾ?

**ಶಿಕ್ಷಕರು** : ಆಯ್ತು. ಹೇಳು ತೇಜಸ್.

**ತೇಜಸ್** : ಸರ್ ಅವು ಗೀಜಗನ ಗೂಡುಗಳು. ನಾನು ಟೀವೀಲಿ ಇದರ ಬಗ್ಗೆ ನೋಡಿದ್ದೇನೆ ಸರ್. ಗುಬ್ಬಿಯ ತರಹವೇ ಇರುವ ಈ ಹಕ್ಕಿಯ ಮೈ ಹಳದಿ ಬಣ್ಣವಿದ್ದು ಕಪಾಲ ಕಪ್ಪು ಬಣ್ಣದ್ದಿರುತ್ತದೆ.

**ಸಹನಾ** : ಹೌದೇ? ಆದರೆ ಇದರ ಗೂಡು ಎಷ್ಟು ಅದ್ಭುತವಾಗಿದೆಯಲ್ಲವೇ?





**ಐಶ್ವರ್ಯ** : ಹೌದು ಸಹನಾ. ಇನ್ನೂ ವಿಶಿಷ್ಟವಾದ ವಿಷಯ ಅದು ಗೂಡನ್ನು ಕಟ್ಟುವ ರೀತಿ. ಎಲ್ಲೆಲ್ಲಿಂದಲೋ ಗೂಡಿಗೆ ಅಗತ್ಯವಾದ ವಸ್ತುಗಳನ್ನು ಜೋಡಿಸಿಕೊಂಡು ನಿರ್ದಿಷ್ಟ ವಿನ್ಯಾಸದಲ್ಲಿ ಗೂಡುಗಳನ್ನು ರೆಂಬೆಯೊಂದಕ್ಕೆ ಕಟ್ಟಿ ತೂಗು ಹಾಕಿವೆ. ಸಾಮಾನ್ಯವಾಗಿ ಯಾರ ಕೈಗೂ ಸಿಗದಂತಹ ಜಾಗದಲ್ಲಿ ಇವು ಗೂಡುಗಳನ್ನು ಕಟ್ಟುತ್ತವೆ.

*(ಮಕ್ಕಳು ವಿಶಿಷ್ಟ ಆಕಾರದ ಗೂಡುಗಳನ್ನು ನೋಡಿ, ಚಿತ್ರ ಬರೆದುಕೊಂಡು ಮುಂದುವರೆಯುವರು)*

**ಜಾನ್** : ಅರೆ! ಅಲ್ಲಿ ನೋಡಿ ಬಣ್ಣದ ಚಿಟ್ಟೆಗಳು! ಎಷ್ಟೊಂದು ಬಗೆಯ ಬಣ್ಣದ ಚಿಟ್ಟೆಗಳು ಇವೆ.

*(ಎಲ್ಲ ಮಕ್ಕಳೂ ಚಿಟ್ಟೆಗಳು ಹಾರಾಡುತ್ತಿರುವ ಹೂಗಳ ಪೊದೆಗಳ ಬಳಿ ಹೋಗುವರು. ಅಷ್ಟರಲ್ಲಿ ಕುಹೂ ಕುಹೂ ಶಬ್ದ ಕೇಳಿಸುತ್ತದೆ)*

**ರಾಜು** : ಓಹ್! ಅಲ್ಲಿ ನೋಡಿ ಕೋಗಿಲೆ! ಎಷ್ಟೊಂದು ಇಂಪಾಗಿ ಕೂಗುತ್ತಿದೆ. ಇಷ್ಟು ಹತ್ತಿರದಿಂದ ಕೋಗಿಲೆಯನ್ನು ನೋಡಿಯೇ ಇರಲಿಲ್ಲ.

**ಇಕ್ಬಾಲ್** : ಸರ್ ಅದು ಕಾಗೆ ತರಹ ಇದೆಯಲ್ಲಾ?

**ಶಿಕ್ಷಕರು** : ಇಕ್ಬಾಲ್, ಕೋಗಿಲೆ ಆಕಾರದಲ್ಲಿ ಕಾಗೆಯ ತರಹವೇ ಇರುತ್ತದೆ. ಆದರೆ ಕಾಗೆಗಿಂತ ಸ್ವಲ್ಪ ಚಿಕ್ಕದು. ಕೋಗಿಲೆಯ ಕೊಕ್ಕು ಉದ್ದವಾಗಿರುತ್ತದೆ. ಕೋಗಿಲೆ ರೈತರ ಬೆಳೆಗೆ ಹಾನಿ ತರುವ ಹುಳುಹುಪ್ಪಡಿಗಳನ್ನು ತಿನ್ನುವುದು. ಆದುದರಿಂದ ರೈತನ ಮಿತ್ರ ಎನಿಸಿದೆ.

**ಇಕ್ಬಾಲ್** : ಕೋಗಿಲೆ ಇಂಪಾಗಿ ಹಾಡುವುದು ಮಾತ್ರ ನಮಗೆ ಗೊತ್ತಿತ್ತು. ಎರೆಹುಳುವಿನ ರೀತಿ ಇದೂ ರೈತನ ಮಿತ್ರ ಎನ್ನುವ ವಿಷಯ ಇಂದು ತಿಳಿಯಿತು ಸರ್.

*(ಮಕ್ಕಳೆಲ್ಲರೂ ಸ್ವಲ್ಪ ಹೊತ್ತು ಕೋಗಿಲೆಯ ದನಿ ಕೇಳಿ, ಮುಂದೆ ಸಾಗುವರು)*

ಸಹನಾ : ಅಲ್ಲಿ ನೋಡಿ ಗುಬ್ಬಿ!

ಶಿಕ್ಷಕರು : ಹೌದು. ಊರ ಹೊರಗಿನ ಪ್ರಶಾಂತ ಜಾಗದ ಮರದ ಮೇಲೆ ಎಷ್ಟೊಂದು ಗುಬ್ಬಿಗಳಿವೆ! ಜನವಸತಿ ಪ್ರದೇಶಗಳಲ್ಲಿ ವಾಸಿಸುವ ಈ ಗುಬ್ಬಿಗಳು ಈಗ ಕಾಣೆಯಾಗುತ್ತಿವೆ.

ಸಹನಾ : ಮೊದಲು ಗುಬ್ಬಿಗಳು ನಮ್ಮ ಮನೆಯ ಬಳಿಯಲ್ಲೇ ಗೂಡುಕಟ್ಟಿಕೊಂಡು ವಾಸ ಮಾಡ್ತಾ ಇದ್ದವಂತೆ. ಮನೆಯ ಅಂಗಳಕ್ಕೆ ದವಸ ಧಾನ್ಯಗಳನ್ನು ತಿನ್ನಲು ಬರುತ್ತಿದ್ದವು ಅಂತ ನನ್ನ ಅಪ್ಪ ಹೇಳ್ತಾರೆ.

ಶಿಕ್ಷಕರು : ಹಿಂದೆ ಗುಬ್ಬಿ, ಪಾರಿವಾಳ ತರಹದ ಅನೇಕ ಪಕ್ಷಿಗಳು ಮನೆಯ ಸುತ್ತಲೂ ವಾಸವಾಗಿರುತ್ತಿದ್ದವು. ಹೆಚ್ಚುತ್ತಿರುವ ಅರಣ್ಯ ನಾಶ, ಪರಿಸರ ಮಾಲಿನ್ಯ ಮುಂತಾದ ಕಾರಣಗಳಿಂದ ಈ ತರಹದ ಪಕ್ಷಿಗಳು ಕಾಣೆಯಾಗುತ್ತಿವೆ.

ಚೈತ್ರ : ಅಯ್ಯೋ ಪಾಪ!

ಮೇರಿ : ಅಲ್ಲಿ ನೋಡಿ! ಜೇನುಗೂಡು ಎಷ್ಟು ದೊಡ್ಡದಿದೆ!

ಸಹನಾ : ಸರ್, ಅಲ್ನೋಡಿ.. ಇಕ್ಬಾಲ್ ಜೇನುಗೂಡಿಗೆ ಕಲ್ಲು ಹೊಡೆಯುತ್ತಿದ್ದಾನೆ.

ಶಿಕ್ಷಕರು : ಏಯ್ ಇಕ್ಬಾಲ್, ನಿಲ್ಲು.. ಜೇನು ಗೂಡಿಗೆ ಕಲ್ಲು ಹೊಡೆಯಬಾರದು. ಜೇನು ಹುಳುಗಳು ತುಂಬಾ ದೂರದವರೆಗೆ ಹೋಗಿ ಬಗೆಬಗೆಯ ಪುಷ್ಪಗಳಿಂದ ಮಕರಂದ ತರುತ್ತವೆ. ಗೂಡನ್ನು ಮೇಲಿನಿಂದ ಕೆಳಕ್ಕೆ ಕಟ್ಟುತ್ತವೆ. ಅಲ್ಲದೆ ಅದರಲ್ಲಿ ನೂರಾರು ಕೋಣೆಗಳಿರುತ್ತವೆ. ರಾಣಿಜೇನು ಹಾಗೂ ಸದಾ ಕೆಲಸ ಮಾಡುವ ಕೆಲಸಗಾರ ಹುಳುಗಳೂ ಇರುತ್ತವೆ.



ಕಾವ್ಯ : ಸರ್, ನಮ್ಮ ಮನೆಯಲ್ಲಿ ಜೇನುತುಪ್ಪ ಇದೆ. ನಾನು ದಿನಾಲು ಅದನ್ನು ಸೇವಿಸುತ್ತೇನೆ. ಅದು ತುಂಬಾ ಸಿಹಿಯಾಗಿರುತ್ತದೆ.

ಶಿಕ್ಷಕರು : ಹೌದು ಕಾವ್ಯ. ಜೇನುತುಪ್ಪ ಬಹಳ ಪುಷ್ಟಿಕರ.

*(ಮಾತನಾಡುತ್ತ ಮಕ್ಕಳು ಇನ್ನಷ್ಟು ದೂರ ಸಾಗುತ್ತಾರೆ)*

ಪೀಟರ್ : ಅಲ್ಲಿ ನೋಡಿ. ಎಷ್ಟು ದೊಡ್ಡ ಆಲದ ಮರ!

ಶಿಕ್ಷಕರು : (ಅದರ ಬಿಳಲುಗಳನ್ನು ತೋರಿಸುತ್ತಾ) ನೋಡಿ ಇವು ಬಿಳಲುಗಳು. ಮುಂದೆ ಇವು ನೆಲಕ್ಕೆ ಇಳಿದು ಬೇರುಗಳಾಗಿ ಅವು ಒಂದೊಂದು ಆಲದ ಮರಗಳಾಗುತ್ತವೆ. ಅನೇಕ ಪ್ರಾಣಿ ಪಕ್ಷಿಗಳಿಗೆ ಆಶ್ರಯ ನೀಡುತ್ತವೆ.



**ಚೈತ್ರ** : ಸರ್, ಈ ಮರದ ನೆರಳಲ್ಲೇ ಊಟ ಮಾಡೋಣವೇ? ನನಗೆ ಆಗಲೇ ಹೊಟ್ಟೆ ತಾಳಹಾಕುತ್ತಿದೆ.

**ಶಿಕ್ಷಕರು** : (ನಗುತ್ತಾ) ಆಯ್ತು ಚೈತ್ರ. ಎಲ್ಲರೂ ಮರದ ನೆರಳಿಗೆ ಬನ್ನಿ. ನೀವು ತಂದ ತಿಂಡಿ–ತಿನಿಸನ್ನು ಹಂಚಿಕೊಂಡು ನಿಧಾನವಾಗಿ ತಿನ್ನಿ. ನೀರನ್ನು ಹೆಚ್ಚು ಚೆಲ್ಲದೇ, ಮಿತವಾಗಿ ಬಳಸಿ.

**ಮಕ್ಕಳು** : ಹಾಗೇ ಆಗಲಿ ಸರ್.

*(ಮಕ್ಕಳೆಲ್ಲರೂ ಮರದ ನೆರಳಿನಲ್ಲಿ ಕುಳಿತು ತಾವು ತಂದ ತಿಂಡಿ ತಿನಿಸುಗಳನ್ನು ಹಂಚಿಕೊಂಡು ತಿಂದರು. ಅನಂತರ ಪ್ರವಾಸದ ಅನುಭವಗಳನ್ನು ಸ್ಮರಿಸುತ್ತ ಶಾಲೆಗೆ ಹಿಂತಿರುಗಿದರು.)*



**ಕ್ಷೇತ್ರ :** ಮಾತನಾಡುವುದು.

**ಸಾಮರ್ಥ್ಯ :** ಸರಿಯಾದ ಉಚ್ಚಾರಣೆಯೊಂದಿಗೆ ನಿರರ್ಗಳವಾಗಿ ಮಾತನಾಡುವುದು.

**ಆಶಯ :** ಮಕ್ಕಳು ತಮ್ಮ ಅಭಿಪ್ರಾಯಗಳನ್ನು ಸೂಚಿಸುವ, ಇತರರ ಅಭಿಪ್ರಾಯಗಳನ್ನು ಗೌರವಿಸುವ ಮತ್ತು ವಹಿಸಿದ ಜವಾಬ್ದಾರಿಗಳನ್ನು ಉತ್ತಮವಾಗಿ ನಿರ್ವಹಿಸುವುದನ್ನು ರೂಢಿಸಿಕೊಳ್ಳುವುದು.

## ಓದಿ ತಿಳಿಯಿರಿ

ಗದ್ದಲ – ಗಲಾಟೆ ; ಅಚ್ಚರಿ – ಆಶ್ಚರ್ಯ; ಆಶ್ರಯ – ಆಸರೆ; ದಿನಾಲು – ಪ್ರತಿದಿನ; ಪುಷ್ಪ–ಹೂವು;

## ಗಮನಿಸಿ ತಿಳಿಯಿರಿ

ಬಿಳಲು – ಮರದಿಂದ ಕೆಳಮುಖವಾಗಿ ಹೊರಟ ಬೇರುಗಳು

## ಅಭ್ಯಾಸ

**ಅ) ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಮಕ್ಕಳು ಎಲ್ಲಿಗೆ ಹೊರಟಿದ್ದರು?

________________________________

೨. ಮಕ್ಕಳು ಯಾರ ಮಾರ್ಗದರ್ಶನದಲ್ಲಿ ಹೊರಟಿದ್ದರು?

________________________________

೩. ಹುತ್ತವನ್ನು ಯಾವ ಹುಳುಗಳು ನಿರ್ಮಿಸುತ್ತವೆ?

________________________________

೪. ಗೀಜಗ ಯಾವ ಪಕ್ಷಿಯ ತರಹ ಇದೆ?

________________________________

೫. ಕೋಗಿಲೆ ಹೇಗೆ ಕೂಗುತ್ತದೆ?

________________________________

೬. ಜೇನುಹುಳುಗಳು ಹೇಗೆ ಗೂಡು ಕಟ್ಟುತ್ತವೆ?

________________________________

೭. ಬಿಳಲುಗಳನ್ನು ಹೊಂದಿರುವ ಮರ ಯಾವುದು?

________________________________

೮. ಎಲ್ಲರೂ ಎಲ್ಲಿ ಕುಳಿತು ವಿಶ್ರಾಂತಿ ಪಡೆದರು?

________________________________

**ಆ) ಈ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಗೀಜಗಗಳನ್ನು ಸುಲಭವಾಗಿ ಗುರುತಿಸಬಹುದು. ಹೇಗೆ?

________________________________________

________________________________________

೨. ಜೇನು ಗೂಡಿಗೆ ಏಕೆ ಕಲ್ಲು ಹೊಡೆಯಬಾರದು?

________________________________________

________________________________________

೩. ಗೀಜಗಗಳು ಹೇಗೆ ಗೂಡು ಕಟ್ಟುತ್ತವೆ?

________________________________________

________________________________________

**ಇ) ಈ ವಾಕ್ಯಗಳನ್ನು ಯಾರು ಯಾರಿಗೆ ಹೇಳಿದರು?**

೧. "ಇದರ ಗೂಡು ಎಷ್ಟು ಅದ್ಭುತವಾಗಿದೆಯಲ್ಲವೇ?"

________________________________________

________________________________________

೨. "ಅಲ್ಲಿ ನೋಡಿ ಕೋಗಿಲೆ! ಎಷ್ಟೊಂದು ಇಂಪಾಗಿ ಕೂಗುತ್ತಿದೆ."

________________________________________

________________________________________

೩. "ಜೇನುತುಪ್ಪ ಬಹಳ ಪುಷ್ಟಿಕರ."

________________________________________

________________________________________

**ಈ) ಖಾಲಿ ಬಿಟ್ಟಿರುವ ಸ್ಥಳಗಳಲ್ಲಿ ಸೂಕ್ತವಾದ ಉತ್ತರವನ್ನು ಆವರಣದಲ್ಲಿ ಕೊಟ್ಟಿರುವ ಪದಗಳಿಂದ ಆರಿಸಿ ಭರ್ತಿಮಾಡಿ ಬರೆಯಿರಿ.**

೧. ಹುತ್ತವನ್ನು ಮಣ್ಣಿನಲ್ಲಿರುವ ______________ ಹುಳುಗಳು ಕಟ್ಟುತ್ತವೆ.
(ಇರುವೆ, ಎರೆಹುಳು, ಗೆದ್ದಲು)

೨. ಕೋಗಿಲೆ ಆಕಾರದಲ್ಲಿ ________________ ತರಹವೇ ಇರುತ್ತದೆ.
(ಕಾಗೆ, ನವಿಲು, ಪಾರಿವಾಳ)

೩. ಬಿಳಲುಗಳನ್ನು ಹೊಂದಿರುವ ಮರ ________________
(ಮಾವಿನ ಮರ, ಆಲದ ಮರ, ತೆಂಗಿನ ಮರ)

**ಉ) ಜೀವಿಗಳ ಹೆಸರನ್ನು ಅವುಗಳ ವಿವರಗಳೊಂದಿಗೆ ಹೊಂದಿಸಿ ಬರೆಯಿರಿ.**

| ಜೀವಿಗಳ ಹೆಸರು | ವಿವರ | |
|---|---|---|
| ೧. ಕೋಗಿಲೆ | ಅ. ಮನೆಯಂಗಳದ ಪಕ್ಷಿ | ________ |
| ೨. ಗೆದ್ದಲು | ಆ. ಹೂವಿನಿಂದ ಮಕರಂದ ಹೀರುವುದು | ________ |
| ೩. ಗೀಜಗ | ಇ. ಹುತ್ತವನ್ನು ಕಟ್ಟುತ್ತದೆ | ________ |
| ೪. ಜೇನುಹುಳು | ಈ. ಕುಹೂ ಕುಹೂ ಕೂಗುವುದು | ________ |
| | ಉ. ಸುಂದರವಾದ ಗೂಡು ಕಟ್ಟುವುದು | ________ |

**ಊ) ಇವುಗಳನ್ನು ನೀನೆ ಎಂದು ಭಾವಿಸಿ ಮಾತನಾಡಿರಿ.**

೧. ಜೇನುತುಪ್ಪ　　　೨. ಮಾವಿನಮರ



**ಋ) ಈ ಪದಗಳನ್ನು ಬಳಸಿಕೊಂಡು ವಾಕ್ಯ ರಚನೆ ಮಾಡಿರಿ.**

೧. ಇಂಪು : ________________________________

೨. ರೈತನಮಿತ್ರ : ________________________________

೩. ಜೇನುತುಪ್ಪ : ________________________________

## ಭಾಷಾಭ್ಯಾಸ

**ಅ) ಮೊದಲೆರಡು ಪದಗಳಿಗೆ ಸಂಬಂಧಿಸಿದಂತೆ, ಮೂರನೆ ಪದಕ್ಕೆ ಸರಿಹೊಂದುವ ಪದವನ್ನು ಆವರಣದಿಂದ ಆರಿಸಿ ಬರೆಯಿರಿ. (ಗೂಡು, ಹುತ್ತ, ಬಿಲ, ಕೊಟ್ಟಿಗೆ)**

೧. ಸಿಂಹ : ಗುಹೆ :: ಇಲಿ : __________

೨. ಗೂಬೆ : ಪೊಟರೆ :: ಗುಬ್ಬಿ : __________

೩. ಕುದುರೆ : ಲಾಯ :: ದನ : ____________

೪. ಮನುಷ್ಯ : ಮನೆ :: ಹಾವು : ____________

**ಆ) ಮಾದರಿಯಂತೆ ಕೂಡಿಸಿ ಬರೆ.**

**ಮಾದರಿ :** ಕರು+ಅನ್ನು= ಕರುವನ್ನು

೧. ನೆಲ+ಅನ್ನು = ____________

೨. ಗುರು+ಅನ್ನು = ____________

೩. ಮರ+ಅನ್ನು = ____________

**ಇ) ಕೆಳಗಿನ ಸ್ತ್ರೀಲಿಂಗ ರೂಪಗಳಿಗೆ ಪುಲ್ಲಿಂಗ ಪದಗಳನ್ನು ಬರೆಯಿರಿ.**

೧. ಧೈರ್ಯವಂತೆ ________________________

೨. ವಿದ್ಯಾವಂತೆ ________________________

೩. ಗುಣವಂತೆ ________________________

೪. ಬುದ್ಧಿವಂತೆ ________________________

**ಈ) ಈ ನುಡಿಗಟ್ಟನ್ನು ಗಮನಿಸಿ. ಶಿಕ್ಷಕರ ಸಹಾಯದಿಂದ ಇನ್ನಷ್ಟು ನುಡಿಗಟ್ಟುಗಳನ್ನು ಸಂಗ್ರಹಿಸಿ, ಅವುಗಳ ಅರ್ಥ ತಿಳಿದುಕೊಳ್ಳಿರಿ.**

೧. ಹೊಟ್ಟೆ ತಾಳಹಾಕು



## ಭಾಷಾ ಹಾಗೂ ಅಭ್ಯಾಸ ಚಟುವಟಿಕೆ

**ಅ.** ನಿಮ್ಮ ಮನೆಯ ಸುತ್ತ ಮುತ್ತ ಕಾಣುವಂತಹ ಪ್ರಾಣಿ, ಪಕ್ಷಿಗಳ ಚಿತ್ರಗಳನ್ನು ಸಂಗ್ರಹಿಸಿರಿ.

**ಆ.** ಮಾವಿನ ಮರದ ಬಗ್ಗೆ, ಚಿಟ್ಟೆಯ ಬಗ್ಗೆ ಪದ್ಯಗಳನ್ನು ಸಂಗ್ರಹಿಸಿ.

**ಇ.** ಹೊರಸಂಚಾರ ಹೋಗಿಬಂದ ಬಗ್ಗೆ ಐದಾರು ವಾಕ್ಯಗಳನ್ನು ಬರೆಯಿರಿ



## ಪದ್ಯಪಾಠ - ೩

# ಬಣ್ಣದ ಟಿ.ವಿ

**ಪ್ರವೇಶಕ್ಕೂ ಮುನ್ನ..**

ನಿಮ್ಮ ಮನೆಯಲ್ಲೂ ಟಿ.ವಿ ಇದೆ ತಾನೇ? ಇಂದು ಯಾರ ಮನೆಯಲ್ಲಿ ಟಿ.ವಿ ಇಲ್ಲಾ? ಅದರ ಪ್ರಭಾವಕ್ಕೆ ಒಳಗಾಗದವರು ಯಾರು? ಈ ಮಾಯಾಪೆಟ್ಟಿಗೆ ಮಾಡಿದ ಮೋಡಿ ಏನೆಂಬುದನ್ನು ತಿಳಿಸುವುದೇ ಈ ಪದ್ಯದ ಆಶಯವಾಗಿದೆ.





ಬಣ್ಣದ ಚಿತ್ರದ
ಟಿ.ವಿ ಪೆಟ್ಟಿಗೆ
ಮೌನವ ತಂದಿತು ಮನೆಗೆಲ್ಲ
ಅಪ್ಪ ಅಮ್ಮಗೆ ಏನೇ ಕೇಳಲು
ನನ್ನಯ ಮಾತಿಗೆ ಬೆಲೆಯಿಲ್ಲ.

ಪುಟ್ಟ ತಂಗಿ
ತೊಟ್ಟಿಲಲತ್ತರು
ಅಮ್ಮ ಎದ್ದು ನೋಡೊಲ್ಲ
ಬೆಕ್ಕು ಬಂದು
ಹಾಲು ಕುಡಿದರೂ
ಯಾರೂ ಈಗ ಕೇಳೊಲ್ಲ

ನೆಂಟರು ಬಂದರು
ತುಂಟರು ಕಲೆತರು
ಹರಟೆಯ ಮಾತು ನಡೆಯೊಲ್ಲ

ಯಾರೆ ಇರಲಿ
ಕುಳಿತೇ ಬಿಡುವರು
ತುಟಿಗಳ ಹೊಲಿಗೆ ಬಿಚ್ಚೊಲ್ಲ
ಹೂವಿನ ತೋಟಕೆ
ನೀರನು ಹಾಕಲು
ಯಾರೂ ಈಗ ದಿಕ್ಕಿಲ್ಲ

ಕತೆಯನು ಹೇಳುವ
ಪ್ರೀತಿಯ ತೋರುವ
ಅಜ್ಜಿಗೆ ಈಗ ಬಿಡುವಿಲ್ಲ
ಬೆಳಗೂ ಬೈಗು
ನೋಡುತ ಕುಳಿತರು
ಎನಿತು ಇವರಿಗೆ ದಣಿವಿಲ್ಲ

ಮಾತೆ ಇಲ್ಲ
ಮೌನವೇ ತುಂಬಿದೆ
ಏಕೋ ಏನೋ ಗೊತ್ತಿಲ್ಲ

– ಚಂದ್ರಗೌಡ ಕುಲಕರ್ಣಿ



**ಕ್ಷೇತ್ರ** : ಮಾತನಾಡುವುದು

**ಸಾಮರ್ಥ್ಯ** : ಪರಿಚಿತ ವಸ್ತುಗಳ ಬಗ್ಗೆ ವಿವರಿಸುವುದು.

**ಕವಿ ಕೃತಿ ಪರಿಚಯ**



ಧಾರವಾಡ ಜಿಲ್ಲೆಯ ನವಲಗುಂದ ತಾಲ್ಲೂಕಿನ ಕರದಳ್ಳಿಯಲ್ಲಿ ೧೯೫೮ರಲ್ಲಿ ಜನಿಸಿದ ಚಂದ್ರಗೌಡ ಕುಲಕರ್ಣಿಯವರು ತಾಳಿಕೋಟೆಯ ಎಸ್.ಕೆ. ಕಲಾ ಮತ್ತು ವಾಣಿಜ್ಯ ಕಾಲೇಜಿನಲ್ಲಿ ಸಹಪ್ರಾಧ್ಯಾಪಕರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಇವರು 'ಬೆಣ್ಣೆ ಹಳ್ಳ', 'ಒಗಟು ಬಿಡಿಸೋ ಜಾಣ', 'ಟಿಂಟಿಂ ಚುಟುಕು', 'ಟೂಟೂ ಬಿಟ್ಟೇನಿ' ಇತ್ಯಾದಿ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಮಕ್ಕಳ ಸಾಹಿತ್ಯ ಹಾಗೂ ಜಾನಪದದಲ್ಲಿ ಆಸಕ್ತಿ ಹೊಂದಿರುವ ಇವರು ೧೯೯೨ರಲ್ಲಿ ಸಾಹಿತ್ಯ ಅಕಾಡೆಮಿಯ ಮಕ್ಕಳ ಸಾಹಿತ್ಯ ಪ್ರಶಸ್ತಿಗೆ ಭಾಜನರಾಗಿದ್ದಾರೆ.

## ಓದಿ ತಿಳಿಯಿರಿ

ಮೌನ – ಮಾತಿಲ್ಲದಿರುವಿಕೆ; ನೆಂಟ– ಬಂಧು ; ತುಂಟ – ತಂಟೆಕೋರ ; ಕಲೆತರು – ಸೇರಿದರು; ಹರಟೆ – ಉಪಯೋಗಕ್ಕೆ ಬಾರದ ಮಾತು ; ನಡೆಯೊಲ್ಲ – ಸಾಧ್ಯವಾಗುವುದಿಲ್ಲ; ತೋರುವ – ತೋರಿಸುವ; ಬಿಡುವು – ರಜೆ; ಬೆಳಗು – ಬೆಳಗ್ಗೆ; ಬೈಗು – ಸಂಜೆ; ಎನಿತು – ಎಷ್ಟು; ದಣಿವು – ಆಯಾಸ, ಸುಸ್ತು

## ಗಮನಿಸಿ ತಿಳಿಯಿರಿ

**ದಿಕ್ಕಿಲ್ಲ** – ಗತಿ ಇಲ್ಲದ; ಅನಾಥವಾದ.

**ತುಟಿಗಳ ಹೊಲಿಗೆ ಬಿಚ್ಚೊಲ್ಲ** – ಮಾತನ್ನು ಆಡದಂತೆ ಸುಮ್ಮನಿರುವುದು

## ಅಭ್ಯಾಸ

**ಅ) ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಯಾವ ವಸ್ತು ಮನೆಗೆಲ್ಲ ಮೌನವ ತಂದಿದೆ?

______________________________

೨. ಪುಟ್ಟ ತಂಗಿ ತೊಟ್ಟಿಲಲ್ಲಿ ಅತ್ತರೂ ಅಮ್ಮ ಏಕೆ ಎದ್ದು ನೋಡಲಿಲ್ಲ?

______________________________

೩. ಬೆಳಗೂ ಬೈಗು ಮನೆಮಂದಿ ಏನು ಮಾಡುತ್ತಾರೆ?

______________________________

೪. ಯಾರ ಹರಟೆ ಟಿ.ವಿ ಯಿಂದಾಗಿ ನಿಂತಿದೆ?

______________________________

೫. ಈ ಪದ್ಯ ಬರೆದ ಕವಿಯ ಹೆಸರೇನು?

______________________________

ಆ) ಈ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಮನೆಗೆ ಟಿ.ವಿ ಬಂದದ್ದರಿಂದ ಉಂಟಾದ ತೊಂದರೆಗಳೇನು?

________________________________________

________________________________________

________________________________________

೨. ಮನೆಯಲ್ಲಿ ಮೌನವೇ ತುಂಬಿರಲು ಕಾರಣವೇನು?

________________________________________

________________________________________

________________________________________

ಆ) ಪದ್ಯದ ಸಾಲುಗಳನ್ನು ಹೊಂದಿಸಿ ಬರೆಯಿರಿ.

| ಅ | ಬ |
|---|---|
| ೧. ಟಿ.ವಿ ಪೆಟ್ಟಿಗೆ | ಅ. ಏಕೋ ಏನೋ ಗೊತ್ತಿಲ್ಲ |
| ೨. ಪುಟ್ಟ ತಂಗಿ ತೊಟ್ಟಿಲಲತ್ತರು | ಆ. ಯಾರೂ ಈಗ ದಿಕ್ಕಿಲ್ಲ |
| ೩. ಹೂವಿನ ತೋಟಕೆ ನೀರು ಹಾಕಲು | ಇ. ಅಮ್ಮ ಎದ್ದು ನೋಡೊಲ್ಲ |
| ೪. ಮಾತೇ ಇಲ್ಲ ಮೌನವೆ ತುಂಬಿದೆ | ಈ. ಮೌನವ ತಂದಿತು ಮನೆಗೆಲ್ಲ |
| | ಉ. ಎನಿತು ಇವರಿಗೆ ದಣಿವಿಲ್ಲ |



ಉ) ಶಿಕ್ಷಕರ ನೆರವಿನಿಂದ ಈ ಪದ್ಯಭಾಗವನ್ನು ಗದ್ಯರೂಪದಲ್ಲಿ ಬರೆಯಿರಿ.

ಪುಟ್ಟ ತಂಗಿ
ತೊಟ್ಟಿಲಲತ್ತರು
ಅಮ್ಮ ಎದ್ದು ನೋಡೊಲ್ಲ
ಬೆಕ್ಕು ಬಂದು
ಹಾಲು ಕುಡಿದರೂ
ಯಾರೂ ಈಗ ಕೇಳೊಲ್ಲ

________________________________________

________________________________________

________________________________________

________________________________________

________________________________________

________________________________________

## ಸಾಮರ್ಥ್ಯ ಆಧಾರಿತ ಅಭ್ಯಾಸ

**ಅ) ಈ ಕೆಳಗೆ ಕೊಟ್ಟಿರುವ ವಿಷಯದ ಬಗ್ಗೆ ಎರಡು ಸಾಲುಗಳಲ್ಲಿ ಬರೆಯಿರಿ.**

೧. ಕ್ರಿಕೆಟ್ ಆಟದ ಬ್ಯಾಟ್ – ______________________________

______________________________________________

೨. ಗಾಳಿಪಟ – ______________________________

______________________________________________

೩. ಬಾವಿ – ______________________________

______________________________________________

೪. ಬೈಸಿಕಲ್ – ______________________________

______________________________________________

**ಆ) ನನ್ನ ಮೆಚ್ಚಿನ ಸಿಹಿ ತಿನಿಸು – ಈ ವಿಷಯ ಕುರಿತು ಐದು ವಾಕ್ಯಗಳನ್ನು ಬರೆಯಿರಿ.**

**ಇ) ಈ ಒಗಟುಗಳನ್ನು ಬಿಡಿಸಿ ಖಾಲಿ ಸ್ಥಳದಲ್ಲಿ ಬರೆಯಿರಿ.**

೧. ಮರದೊಳಗೆ ಮರ ಹುಟ್ಟಿ
ಮರ ಚಿತ್ರ ಕಾಯಾಗಿ
ತಿನ್ನಬಾರದ ಹಣ್ಣು ಬಲು ರುಚಿ ______________

೨. ಅಡವಿಯಲ್ಲಿ ಹುಟ್ಟಿದ ಗಿಡ ಗೋಪಾಲ,
ನಿನಗೆ ಯಾರಿಟ್ಟರು ಸಾದಿನ ಚುಕ್ಕೆ? ______________



## ಭಾಷಾಭ್ಯಾಸ

**ಅ) ಎರಡು ಪದಗಳು ಸೇರಿ ಆಗಿರುವ ಈ ಪದಗಳನ್ನು ಗಮನಿಸಿರಿ.**

೧. ದಣಿವು + ಇಲ್ಲ – ದಣಿವಿಲ್ಲ

೨. ಮಾಡು + ಇಲ್ಲ – ಮಾಡಿಲ್ಲ

೩. ಗೊತ್ತು + ಇಲ್ಲ – ಗೊತ್ತಿಲ್ಲ

೪. ದಿಕ್ಕು + ಇಲ್ಲ – ದಿಕ್ಕಿಲ್ಲ

**ಆ) ಈ ವಾಕ್ಯಗಳನ್ನು ಗಮನಿಸಿರಿ. ಇವುಗಳ ಅರ್ಥ ಗ್ರಹಿಸಿರಿ.**

೧. ತುಟಿಗಳ ಹೊಲಿಗೆ ಬಿಚ್ಚೊಲ್ಲ

೨. ನನ್ನಯ ಮಾತಿಗೆ ಬೆಲೆಯಿಲ್ಲ

ಇ) ಈ ವಾಕ್ಯಗಳನ್ನು ಮಾದರಿಯಂತೆ ಬದಲಾಯಿಸಿ ಬರೆಯಿರಿ.

ಮಾದರಿ : ಊಟ ಮಾಡುತ್ತೇನೆ – ಊಟ ಮಾಡೊಲ್ಲ

೧. ಹಾಲು ಕುಡಿಯುತ್ತೇನೆ – ____________________

೨. ಆಟ ಆಡುತ್ತೇನೆ – ____________________

೩. ಹಠ ಮಾಡುತ್ತೇನೆ – ____________________

ಈ) ಈ ವಾಕ್ಯಗಳಲ್ಲಿ ತಪ್ಪಾಗಿರುವ ಪದಗಳಿಗೆ ಅಡಿಗೆರೆ ಹಾಕಿರಿ.

೧. ಮೌನವ ತಂಧಿತು ಮನೆಗೆಲ್ಲ.

೨. ನನ್ನಯ ಮಾಥಿಗೆ ಬೆಲೆಯಿಲ್ಲ.

೩. ಹರಠೆಯ ಮಾತು ನಡೆಯೊಲ್ಲ.

೪. ತುಟಿಗಳ ಹೊಳಿಗೆ ಬಿಚ್ಚೊಲ್ಲ.

## ವ್ಯಾಕರಣಾಂಶ

### ಭಾಗ – ೧

ಅ. ಈ ಪ್ರಶ್ನೆಗಳಿಗೆ ಸೂಕ್ತ ಉತ್ತರವನ್ನು ಗುರುತಿಸಿ.

೧. ವ್ಯಂಜನಗಳಲ್ಲಿ ಎಷ್ಟು ವಿಧ?

ಅ. ನಾಲ್ಕು ಆ. ಎರಡು ಇ. ಮೂರು ಈ. ಆರು

೨. ಮೂಗಿನ ಸಹಾಯದಿಂದ ಉಚ್ಚರಿಸುವ ಅಕ್ಷರಗಳಿಗೆ ಏನೆನ್ನುವರು?

ಅ. ವ್ಯಂಜನಗಳು ಆ. ಸ್ವರಗಳು ಇ. ಅನುನಾಸಿಕಗಳು ಈ. ಯೋಗವಾಹಗಳು

೩. ಯ್, ರ್, ಲ್, ವ್, ಶ್, ಷ್, ಸ್, ಹ್, ಳ್ ಇವು ಏನು?

ಅ. ಹ್ರಸ್ವ ಸ್ವರಗಳು ಆ. ದೀರ್ಘ ಸ್ವರಗಳು

ಇ. ವರ್ಗೀಯ ವ್ಯಂಜನ ಈ. ಅವರ್ಗೀಯ ವ್ಯಂಜನಗಳು



### ಭಾಗ – ೨

**ಗುಣಿತಾಕ್ಷರಗಳು**

ವ್ಯಂಜನಗಳಿಗೆ ಸ್ವರಗಳು ಸೇರಿ ಆಗುವ ಅಕ್ಷರಗಳನ್ನು ಗುಣಿತಾಕ್ಷರಗಳೆನ್ನುತ್ತೇವೆ.

ಉದಾಹರಣೆ : ೧. ಗ್ + ಅ = ಗ ೨. ಲ್ + ಇ = ಲಿ

೩. ಮ್ + ಉ = ಮು ೪. ತ್ + ಓ = ತೋ

**ಗುಣಿತಾಕ್ಷರಗಳನ್ನು ಬಿಡಿಸುವ ಮಾದರಿ.**

ಕಾಗೆ = ಕ್ + ಆ + ಗ್ + ಎ

ಆ. ಈ ಗುಣಿತಾಕ್ಷರಗಳನ್ನು ಬಿಡಿಸಿ ಬರೆಯಿರಿ.

೧. ಕಮಲ ೨. ಕನಕ ೩. ರಮೇಶ ೪. ನಾಯಿ

# ಚಿನ್ನದ ಗರಿಯ ನವಿಲು

**ಪ್ರವೇಶಕ್ಕೂ ಮುನ್ನ..**

ಕಥೆ ಎಂದರೆ ಮಕ್ಕಳಿಂದ ವೃದ್ಧರವರೆಗೆ ಎಲ್ಲರಿಗೂ ಇಷ್ಟ. ಇವು ಕುತೂಹಲವನ್ನು ಹೆಚ್ಚಿಸುವುವು. ಅಡಗೂಲಜ್ಜಿಯ ಕಥೆಗಳು, ಮಕ್ಕಳ ಕಥೆಗಳು, ಜಾನಪದ ಕಥೆಗಳು, ಪೌರಾಣಿಕ ಕಥೆಗಳು ನಮಗೆ ಮನರಂಜನೆಯನ್ನು ಒದಗಿಸುವುದಷ್ಟೇ ಅಲ್ಲ. ಅವು ಮೌಲ್ಯವರ್ಧಕಗಳೂ ಆಗಿರುವುದು ಗಮನಾರ್ಹ. ಇಂತಹ ಒಂದು ಕಥೆ ಇಲ್ಲಿದೆ.

ನವಿಲೂರಿನಲ್ಲಿ ಸುಬ್ಬ ಎಂಬ ಒಬ್ಬ ಕಟ್ಟಿಗೆ ಮಾರುವವನು ಇದ್ದನು. ಅವನು ಹತ್ತಿರದ ಕಾಡಿಗೆ ಹೋಗಿ ಕಟ್ಟಿಗೆ ತರುತ್ತಿದ್ದನು. ಕಟ್ಟಿಗೆ ಮಾರಿ ಬಂದ ಹಣದಲ್ಲಿ ಹೆಂಡತಿಯೊಂದಿಗೆ ನೆಮ್ಮದಿಯಾಗಿ ಜೀವನ ನಡೆಸುತ್ತಿದ್ದನು.



ಒಂದು ದಿನ ಕಟ್ಟಿಗೆ ತರಲು ಕಾಡಿಗೆ ಹೋದಾಗ ಮರದ ಬಳಿ ನವಿಲಿನ ಮರಿಯೊಂದನ್ನು ನೋಡಿದನು. ಅದು ಬಂಗಾರದ ಬಣ್ಣದ ಗರಿಗಳನ್ನು ಹೊಂದಿತ್ತು! ಅದರ ಕಾಲಿಗೆ ಪೆಟ್ಟಾಗಿ ರಕ್ತ ಸೋರುತ್ತಿತ್ತು. ಅದು ನೋವಿನಿಂದ ನರಳುತ್ತಿತ್ತು. ಅದನ್ನು ಕಂಡು ಅವನಿಗೆ ಅಯ್ಯೋ! ಎನ್ನಿಸಿತು. ಅದನ್ನು ಎತ್ತಿಕೊಂಡು ಮನೆಗೆ ಬಂದನು. ಚೆನ್ನಾಗಿ ಆರೈಕೆ ಮಾಡಿದನು.

ಆ ಪುಟ್ಟ ನವಿಲು ಚೇತರಿಸಿಕೊಂಡು, ಮೆಲ್ಲನೆ ಓಡಾಡತೊಡಗಿತು.

ಹೆಂಡತಿ ಸುಬ್ಬಿ, "ಈ ನವಿಲಿನ ಮರಿಯನ್ನು ಮಾರೋಣ? ಚಿನ್ನದ ಬಣ್ಣದ ಗರಿ ಇರುವ ಇದನ್ನು ಮಾರಿದರೆ ಹೆಚ್ಚು ಹಣ ಸಿಗುವುದು" ಎಂದಳು. ಅವಳ ದುರಾಸೆಯ ಮಾತುಗಳಿಂದ ಅವನಿಗೆ ಬೇಸರವಾಯಿತು.

ಒಂದು ಹುಣ್ಣಿಮೆಯ ರಾತ್ರಿ ನವಿಲಿನ ಮರಿ ಆನಂದದಿಂದ ಜೋರಾಗಿ ಕುಣಿಯತೊಡಗಿತ್ತು. ಸುಬ್ಬ ಮನೆಯಿಂದ ಹೊರಗೆ ಬಂದು ನೋಡಿದನು. ನವಿಲಿನ ಮರಿಯ ಆನಂದವನ್ನು ಕಂಡು ಅವನಿಗೆ ಸಂತೋಷವಾಯಿತು. ಮೈಮರೆತು ಅದರ ನೃತ್ಯ ನೋಡುತ್ತಿದ್ದಾಗ ದೊಡ್ಡ ನವಿಲೊಂದು ಆಕಾಶದಿಂದ ಅಂಗಳಕ್ಕೆ ಇಳಿಯಿತು. ಅದರ ಗರಿಗಳೂ ಚಿನ್ನದ ಬಣ್ಣವನ್ನು ಹೊಂದಿದ್ದವು. ಆಗ ನವಿಲಿನ ಮರಿ ಅದರ ಬಳಿ ಓಡಿಹೋಯಿತು. ಅದನ್ನು ಕಂಡು ಸುಬ್ಬಣ್ಣನಿಗೆ ತಾನು ಸಾಕುತ್ತಿರುವುದು ಆ ದೊಡ್ಡ ನವಿಲಿನ ಮರಿ ಎಂದು ಅರಿವಾಯಿತು.

ಆ ದೊಡ್ಡ ನವಿಲು ಸುಬ್ಬನ ಬಳಿಗೆ ಬಂದು "ಹಲವು ದಿನಗಳ ಹಿಂದೆ ಭೂಲೋಕಕ್ಕೆ ಬಂದಾಗ ನನ್ನ ಮರಿ ತಪ್ಪಿಸಿಕೊಂಡಿತ್ತು. ನಾನು ಅದನ್ನು ಎಲ್ಲಾ ಕಡೆ ಹುಡುಕಿ, ಸಿಗದೆ ಕಂಗಾಲಾಗಿದ್ದೆ. ಈ ದಿನ ನನ್ನ ಮರಿಯನ್ನು ನೋಡಿ ತುಂಬಾ ಸಂತೋಷವಾಯಿತು. ನನ್ನ ಮರಿಯನ್ನು ಜೋಪಾನ ಮಾಡಿರುವೆ. ಅದಕ್ಕಾಗಿ ನಿನಗೆ ಧನ್ಯವಾದಗಳು" ಎಂದಿತು.

ಸುಬ್ಬನಿಗೆ ಮಾತನಾಡುತ್ತಿದ್ದ ನವಿಲನ್ನು ಕಂಡು ಆಶ್ಚರ್ಯವಾಯಿತು. 'ಓಹೋ! ಇದೇನು? ನವಿಲು ಮಾತನಾಡುತ್ತಿದೆಯಲ್ಲ' ಎಂದು ಸುಬ್ಬ ಯೋಚಿಸುತ್ತಿರುವಾಗ ಆ ನವಿಲು ಅವನ ಬಳಿ ಬಂದು, "ನಾನು ಗಂಧರ್ವಲೋಕದ ಚಿನ್ನದ ಗರಿಯ ನವಿಲು. ಇದು ನನ್ನ ಮರಿ. ನಾನು ನಿನಗೆ ಮೂರು ಚಿನ್ನದ ಗರಿಗಳನ್ನು ನೀಡುತ್ತೇನೆ. ಈ ಗರಿಗಳಿಗೆ ಏನನ್ನೂ ಕೇಳಿದರೂ ಕೊಡುವಂತಹ ಶಕ್ತಿ ಇದೆ" ಎಂದು ಅವನಿಗೆ ಮೂರು ಚಿನ್ನದ ಗರಿಗಳನ್ನು ನೀಡಿತು.



ಅವನಿಗೆ ಗರಿಗಳನ್ನು ಪಡೆದು ತುಂಬಾ ಸಂತೋಷವಾಯಿತು. "ನೀನು ಈ ಮೂರು ಗರಿಗಳಲ್ಲಿ ಕೇವಲ ಎರಡು ಗರಿಗಳನ್ನು ಮಾತ್ರ ಉಪಯೋಗಿಸಬಹುದು. ಆದರೆ ಮೂರನೆಯ ಗರಿಯನ್ನು ಯಾವ ಕಾರಣಕ್ಕೂ ಉಪಯೋಗಿಸುವಂತಿಲ್ಲ" ಎಂದು ಎಚ್ಚರಿಸಿತು.

ಸಂತೋಷದಿಂದ ತನ್ನ ಮರಿಯನ್ನು ಎತ್ತಿಕೊಂಡು ಆಕಾಶಕ್ಕೆ ಹಾರಿ ಹೋಯಿತು. ಸುಬ್ಬ ಹೆಂಡತಿಯನ್ನು ಕರೆದು ಅದ್ಭುತ ಘಟನೆಯನ್ನ ವರ್ಣಿಸಿದನು. ನವಿಲು ಕೊಟ್ಟಿದ್ದ ಮೂರು ಚಿನ್ನದ ಗರಿಗಳನ್ನು ತೋರಿಸಿದನು.

ಹೆಂಡತಿ ಸುಬ್ಬಿ "ಹಾಗಾದರೆ ಈಗಲೇ ಪರೀಕ್ಷಿಸೋಣವೇ? ನಮಗೆ 'ಒಂದು ಅರಮನೆ ಬೇಕು' ಎಂದು ಕೇಳಿ" ಎಂದಳು.

ಸುಬ್ಬನು ಒಂದು ಗರಿಯನ್ನು ಆಕಾಶಕ್ಕೆಸೆದು 'ನಮಗೆ ಒಂದು ಅರಮನೆ ಬೇಕು' ಎಂದು ಕೇಳಿಕೊಂಡ. ಇದ್ದಕ್ಕಿದ್ದಂತೆ ಗರಿ ಮಾಯವಾಯಿತು. ಅವರ ಗುಡಿಸಲು ಇದ್ದ ಸ್ಥಳದಲ್ಲಿ ಒಂದು ಸುಂದರವಾದ ಅರಮನೆ ಬಂದಿತು!

ಸುಬ್ಬಿ ಬೆಕ್ಕಸಬೆರಗಾಗಿ, ಆನಂದದಿಂದ ಕುಣಿದಾಡಿದಳು. ಸುಬ್ಬನಿಗೂ ಸಂತಸವಾಯಿತು.

ಅಷ್ಟಕ್ಕೆ ಸುಬ್ಬಿಗೆ ಸಮಾಧಾನವಾಗಲಿಲ್ಲ. ಅವಳು ಸುಬ್ಬನಿಗೆ "ಅರಮನೆ ಸಿಕ್ಕಿತು, ಈಗ ನಮಗೆ ಆಳುಕಾಳುಗಳು ಮತ್ತು ಧನ-ಧಾನ್ಯಗಳು ಬೇಕಲ್ಲವೇ? ಈಗ ಆಳುಕಾಳು ಧನಧಾನ್ಯಗಳನ್ನು ಕೇಳಿ" ಎಂದು ಒತ್ತಾಯಿಸಿದಳು. ಅವಳ ಮಾತಿನಂತೆ ಅವನು ಮತ್ತೊಂದು ಗರಿಯನ್ನು ಮೇಲಕ್ಕೆ ಎಸೆದು, ಹೆಂಡತಿಯ ಮಾತಿನಂತೆ ಕೇಳಿಕೊಂಡನು. ಕ್ಷಣಮಾತ್ರದಲ್ಲಿ ಎರಡನೆಯ ಗರಿಯೂ ಆಕಾಶದಲ್ಲಿ ಮಾಯವಾಯಿತು. ಅರಮನೆಯು ಆಳು-ಕಾಳುಗಳು ಮತ್ತು ಧನಧಾನ್ಯಗಳಿಂದ ತುಂಬಿತು! ಅವರಿಬ್ಬರ ಸಂತೋಷಕ್ಕೆ ಪಾರವೇ ಇರಲಿಲ್ಲ.

ಆಸೆ ತೀರದ ಸುಬ್ಬಿಯು ಗಂಡನನ್ನು ಕುರಿತು "ನಾವೀಗ, ಅರಮನೆಯಲ್ಲಿದ್ದೇವೆ. ನಾವೇಕೇ ರಾಜ ರಾಣಿ ಆಗಬಾರದು? ಬನ್ನಿ, ಇನ್ನೊಂದು ಗರಿಯನ್ನು ಎಸೆದು, ನಮ್ಮನ್ನು ರಾಜ, ರಾಣಿ ಮಾಡುವಂತೆ ಕೇಳಿಕೊಳ್ಳೋಣ" ಎಂದು ಪೀಡಿಸಿದಳು.

ಸುಬ್ಬನಿಗೆ ಹೆಂಡತಿಯ ಅತಿ ಆಸೆಗೆ ಬೇಸರವಾಯಿತು. ಮೂರನೆಯ ಗರಿಯ ಬಗ್ಗೆ ನವಿಲು ತಿಳಿಸಿದ ವಿಚಾರವನ್ನು ಹೇಳಿದನು.

ಆದರೂ, ಆಕೆ ತನ್ನ ಹಠ ಬಿಡಲಿಲ್ಲ. ನಿರುಪಾಯನಾದ ಸುಬ್ಬ ಹೆಂಡತಿ ಹೇಳಿದಂತೆಯೇ ಮಾಡಿದ. ಕ್ಷಣಮಾತ್ರದಲ್ಲಿ ಅವರ ಅರಮನೆ, ಆಳು-ಕಾಳು, ಧನ-ಧಾನ್ಯ ಮಾಯವಾಯಿತು. ಹಿಂದೆ ಇದ್ದಂತೆಯೇ ಮುರುಕು ಗುಡಿಸಲು ಬಂದಿತು.

ಸುಬ್ಬ ಮತ್ತು ಸುಬ್ಬಿಯರಿಗೆ ತುಂಬಾ ದುಃಖವಾಯಿತು. ತಾವು ಮಾಡಿದ ತಪ್ಪಿನ ಅರಿವಾಯಿತು. ಹುಣ್ಣಿಮೆಯ ರಾತ್ರಿಗಳಲ್ಲಿ ಬಂಗಾರದ ನವಿಲು ಬರಬಹುದೆಂದು ಕಾಯುತ್ತಲೇ ಇಬ್ಬರೂ ಆಕಾಶವನ್ನು ನೋಡುತ್ತಾ ಕುಳಿತಿರುತ್ತಿದ್ದರು.

ಗಂಧರ್ವಲೋಕದಿಂದ ಬಂಗಾರದ ನವಿಲು ಬರಲೇ ಇಲ್ಲ!



(ಜಾನಪದ ಮೂಲ)

**ಕ್ಷೇತ್ರ :** ಬರೆಯುವುದು

**ಸಾಮರ್ಥ್ಯ :** ಉಕ್ತಲೇಖನದ ಮೂಲಕ ಪದ ಹಾಗೂ ಲೇಖನಚಿಹ್ನೆ ಸಹಿತ ವಾಕ್ಯಗಳನ್ನು ಬರೆಯುವುದು.

## ಓದಿ - ತಿಳಿಯಿರಿ

ನೆಮ್ಮದಿ - ಸಮಾಧಾನ; ನರಳು - ವೇದನೆಪಡು ; ಜೋಪಾನ - ಕಾಪಾಡುವಿಕೆ, ಒತ್ತಾಯಿಸು - ಬಲವಂತ ಮಾಡು, ಪೀಡಿಸು - ಹಿಂಸೆ ಕೊಡು; ನಿರುಪಾಯ - ಉಪಾಯವಿಲ್ಲದೆ; ಬೇಸರ - ಜಿಗುಪ್ಸೆ ; ಆರೈಕೆ - ಉಪಚಾರ, ಪಾಲನೆ; ದುರಾಸೆ - ಕೆಟ್ಟಆಸೆ; ಮೈಮರೆತು - ಎಚ್ಚರವಿಲ್ಲದಂತಿರುವುದು;

## ಗಮನಿಸಿ – ತಿಳಿಯಿರಿ

ಅಯ್ಯೋ ಎನಿಸು – ಮರುಗುವುದು

ಬೆಕ್ಕಸ ಬೆರಗಾಗು – ಆಶ್ಚರ್ಯಪಡು

ಗಂಧರ್ವಲೋಕ – ದೇವಲೋಕ

ಹುಣ್ಣಿಮೆ – ಚಂದ್ರ ಆಕಾಶದಲ್ಲಿ ಸಂಪೂರ್ಣವಾಗಿ ಗೋಚರಿಸುವ ದಿನ, ಪೂರ್ಣಿಮೆ

## ಅಭ್ಯಾಸ

**ಅ) ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಸುಬ್ಬನ ವೃತ್ತಿ ಯಾವುದಾಗಿತ್ತು?

೨. ನವಿಲಿನ ಮರಿ ಏಕೆ ನರಳುತ್ತಿತ್ತು?

೩. ಸುಬ್ಬನ ಸಂತೋಷಕ್ಕೆ ಕಾರಣವೇನು?

೪. ದೊಡ್ಡ ನವಿಲು ನೀಡಿದ ಎಚ್ಚರಿಕೆ ಏನು?

೫. ಸುಬ್ಬಿ ಮೂರನೆಯ ಚಿನ್ನದ ಗರಿಯಿಂದ ಏನನ್ನು ಪಡೆಯಲು ಬಯಸಿದಳು?

**ಆ) ಈ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಸುಬ್ಬಿಯ ಯಾವ ಮಾತುಗಳಿಂದ ಸುಬ್ಬನಿಗೆ ಬೇಸರವಾಯಿತು?

೨. ದೊಡ್ಡ ನವಿಲು ಸುಬ್ಬನಿಗೆ ಧನ್ಯವಾದ ಅರ್ಪಿಸಲು ಕಾರಣವೇನು?

೩. ಸುಬ್ಬಿ ಮೂರೂ ಚಿನ್ನದ ಗರಿಗಳಿಂದ ಏನನ್ನು ಪಡೆಯಲು ಬಯಸಿದಳು?

___

___

___

೪. ಸುಬ್ಬ ಸುಬ್ಬಿಯರ ದುಃಖಕ್ಕೆ ಕಾರಣವೇನು?

___

___

___

## ಇ) ಈ ವಾಕ್ಯಗಳನ್ನು ಯಾರು ಯಾರಿಗೆ ಹೇಳಿದರು?

೧. "ಚಿನ್ನದ ಬಣ್ಣದ ಗರಿ ಇರುವ ಇದನ್ನು ಮಾರಿದರೆ ಹೆಚ್ಚು ಹಣ ಸಿಗುವುದು"

___

___

೨. "ಈ ದಿನ ನನ್ನ ಮರಿಯನ್ನು ನೋಡಿ ತುಂಬಾ ಸಂತೋಷವಾಯಿತು"

___

___

೩. "ನಮಗೆ ಒಂದು ಅರಮನೆ ಬೇಕು ಎಂದು ಕೇಳಿ"

___

___

೪. "ನಾವೇಕೆ ರಾಜ-ರಾಣಿ ಆಗಬಾರದು?"

___

___



## ಈ) ಖಾಲಿ ಬಿಟ್ಟಿರುವ ಸ್ಥಳಗಳನ್ನು ಸೂಕ್ತವಾದ ಪದಗಳಿಂದ ಭರ್ತಿಮಾಡಿ ಬರೆಯಿರಿ.

೧. ನವಿಲಿನ ಮರಿ ___ ಬಣ್ಣದ ಗರಿಗಳನ್ನು ಹೊಂದಿತ್ತು.

೨. ಹುಣ್ಣಿಮೆಯ ___ ನವಿಲಿನ ಮರಿ ಆನಂದದಿಂದ ಜೋರಾಗಿ ಕುಣಿಯುತ್ತಿತ್ತು.

೩. ನಾನು ___ ಲೋಕದ ಚಿನ್ನದ ಗರಿಯ ನವಿಲು.

೪. ಮೂರನೆಯ ಗರಿಯನ್ನು ಯಾವ ಕಾರಣಕ್ಕೂ ___

**ಉ) ಈ ಪದಗಳಿಗೆ ಸಮಾನ ಅರ್ಥದ ಎರಡು ಪದಗಳನ್ನು ಬರೆಯಿರಿ.**

೧. ಅರಣ್ಯ : ________________, ________________

೨. ಹೆಂಡತಿ : ________________, ________________

೩. ರಾಜ : ________________, ________________

೪. ಸಂತೋಷ : ________________, ________________

**ಊ) ಈ ವಾಕ್ಯಗಳನ್ನು ಗಮನಿಸಿ. ಸೂಕ್ತ ಜಾಗಕ್ಕೆ ಲೇಖನ ಚಿಹ್ನೆಗಳನ್ನು ಹಾಕಿ, ಓದಿರಿ.**

೧. ಓಹೋ ಇದೇನು ನವಿಲು ಮಾತನಾಡುತ್ತಿದೆಯಲ್ಲ

೨. ಹಾಗಾದರೆ ಈಗಲೇ ಪರೀಕ್ಷಿಸೋಣವೇ ನಮಗೆ ಒಂದು ಅರಮನೆ ಬೇಕೆಂದು ಕೇಳಿ

೩. ನಾವೀಗ ಅರಮನೆಯಲ್ಲಿದ್ದೇವೆ ನಾವೇಕೆ ರಾಜ–ರಾಣಿಯರಾಗಬಾರದು

**ಋ) ಈ ವಾಕ್ಯಗಳಲ್ಲಿ ತಪ್ಪಾಗಿರುವ ಪದಗಳನ್ನು ಸರಿಪಡಿಸಿ ಬರೆಯಿರಿ.**

೧. ನಾನು ಗಂಧರ್ವಲೋಕದ ಬೆಳ್ಳಿಯ ನವಿಲು.

________________________________________

೨. ಚಿನ್ನದಗರಿಯ ನವಿಲು ನಾಲ್ಕು ಗರಿಗಳನ್ನು ನೀಡಿತು.

________________________________________

೩. ಸುಬ್ಬನಿಗೆ ಹೆಂಡತಿಯ ಅತಿ ಆಸೆಯಿಂದ ಸಂತೋಷವಾಯಿತು.

________________________________________

೪. ಎರಡನೆಯ ಚಿನ್ನದ ಗರಿಯ ಬಳಕೆಯಿಂದ ಅರಮನೆಯ ಆಳು–ಕಾಳು, ಧನ–ಧಾನ್ಯ ಮಾಯವಾಯಿತು.

________________________________________

________________________________________

## ಭಾಷಾ ಚಟುವಟಿಕೆ

ಅ) ಈ ಕಥೆಯನ್ನು ಮನೆಯಲ್ಲಿ ಎಲ್ಲರಿಗೂ ನಿಮ್ಮ ಮಾತುಗಳಲ್ಲಿ ಹೇಳಿರಿ.

ಆ) ಇಂತಹ ಕಥೆಗಳನ್ನು ಸಂಗ್ರಹಿಸಿರಿ.

## ಪೂರಕ ಪಾಠ

# ಚಿನ್ನದ ಕುಂಬಳಕಾಯಿ

ಒಂದು ಊರಿನಲ್ಲಿ ರಂಗ ಎಂಬುವವನಿದ್ದನು. ಅವನು ಕಬ್ಬನ್ನು ಬೆಳೆದಿದ್ದ. ಕಷ್ಟಪಟ್ಟು ದುಡಿದಿದ್ದ ಕಾರಣ ಕಬ್ಬು ತುಂಬಾ ಬೆಳೆದಿತ್ತು. ಅದರಿಂದ ಅವನಿಗೆ ತುಂಬಾ ಸಂತೋಷವಾಗಿತ್ತು. ಆದರೆ ಒಂದು ದಿನ ಮುಂಜಾನೆ ತನ್ನ ಗದ್ದೆಗೆ ಬಂದು ನೋಡಿದರೆ, ಕಬ್ಬಿನ ಗದ್ದೆಯೆಲ್ಲಾ ಅಸ್ತವ್ಯಸ್ತವಾಗಿದ್ದು, ಬಹಳಷ್ಟು ಕಬ್ಬನ್ನು ಯಾವುದೋ ಪ್ರಾಣಿ ತಿಂದು ತುಳಿದು ಹಾಕಿತ್ತು. ತುಂಬಾ ಬೇಸರಗೊಂಡ ರಂಗನಿಗೆ ಇದೆಲ್ಲಾ ಹೇಗೆ ಆಯಿತೆಂದು ಹೊಳೆಯಲಿಲ್ಲ. ಅಸಮಾಧಾನದಿಂದ ಮನೆಗೆ ಬಂದ. ಮಾರನೆಯ ದಿನವೂ ಇದೇ ಕತೆ ಪುನರಾವರ್ತನೆಯಾಗಿತ್ತು.

ರಂಗನಿಗೆ ಈಗ ನಿಜವಾಗಿಯೂ ಚಿಂತೆಯಾಯಿತು. ಅದಕ್ಕೆ ಬಹಳ ಹೊತ್ತು ಯೋಚಿಸಿದ. ಅವನು ಒಂದು ಉಪಾಯ ಹೂಡಿದ. ರಾತ್ರಿ ರಂಗ ಮನೆಗೆ ಹೋಗದೇ ಗದ್ದೆಯಲ್ಲಿದ್ದ ಮಾಳದಲ್ಲೇ ಮಲಗಿ ಆ ಅಗೋಚರವಾದ ಪ್ರಾಣಿಯನ್ನು ಕಂಡುಹಿಡಿಯಲು ಯೋಚಿಸಿದ. ರಾತ್ರಿ ಊಟ ಮಾಡಿ ಬಂದು ಗದ್ದೆಯಲ್ಲಿದ್ದ ಮಾಳದಲ್ಲಿ ಕುಳಿತು ಕಾಯತೊಡಗಿದ. ಬಹಳ ಹೊತ್ತಿನ ತನಕ ಯಾವ ಪ್ರಾಣಿಯೂ, ಯಾರೊಬ್ಬರೂ ಅಲ್ಲಿ ಕಾಣಿಸಲಿಲ್ಲ. ಅವನಿಗೆ ನಿದ್ರೆ ಬರಲು ಪ್ರಾರಂಭವಾಯಿತು. ಅಷ್ಟರಲ್ಲಿ ಆಕಾಶದಿಂದ ಒಂದು ಆನೆ ನಿಧಾನವಾಗಿ ಗದ್ದೆಗೆ ಇಳಿಯಿತು. ರಂಗನಿಗೆ ತನ್ನ ಕಣ್ಣ ಮುಂದೆ ನಡೆಯುತ್ತಿರುವುದು ನಿಜವೋ ಸುಳ್ಳೋ ಎಂದು ನಂಬಲಾಗಲಿಲ್ಲ. ಕಣ್ಣುಜ್ಜಿ ಮತ್ತೆ ಮತ್ತೆ ನೋಡಿದ. ಆಕಾಶದಿಂದಿಳಿದ ಆನೆ ತನಗೆ ತೃಪ್ತಿಯಾಗುವಷ್ಟು ಕಬ್ಬನ್ನು ತಿಂದು ಬೆಳಕು ಹರಿಯುತ್ತಿದ್ದಂತೆ ಆಕಾಶಕ್ಕೆ ಹಾರಿ ಹೋಯಿತು.

ಇದನ್ನೆಲ್ಲಾ ನೋಡಿಕೊಂಡು ವಾಪಸ್ಸು ಮನೆಗೆ ಬಂದ ರಂಗ ಯಾರ ಬಳಿಯಲ್ಲೂ ಈ ಸುದ್ದಿಯನ್ನು ಹೇಳಲಿಲ್ಲ. ಅಂದಿನ ರಾತ್ರಿ ಮತ್ತೆ ಕಬ್ಬಿನ ಗದ್ದೆ ಕಾಯಲು ಹೋದ. ಪುನಃ ಆಕಾಶದಿಂದ ಇಳಿದ ಆನೆ ಯಥಾಪ್ರಕಾರ ಕಬ್ಬನ್ನು ಚೆನ್ನಾಗಿ ಮೇದು ಆಕಾಶಕ್ಕೆ ಹಾರಲು ಸಿದ್ಧವಾಯಿತು. ರಂಗ ಧೈರ್ಯ ಮಾಡಿ ಆ ಆನೆಯ ಬಾಲವನ್ನು ಗಟ್ಟಿಯಾಗಿ ಹಿಡಿದುಕೊಂಡು ಬಿಟ್ಟ.

ಆನೆ ಆಕಾಶಕ್ಕೆ ಹಾರತೊಡಗಿತು. ಅವನು ಬಾಲವನ್ನು ಹಿಡಿದುಕೊಂಡೇ ಇದ್ದ. ಆಕಾಶದಲ್ಲಿ ಹಾರಾಡುತ್ತಿದ್ದ ಆನೆ ಒಂದು ಸ್ಥಳದಲ್ಲಿ ಇಳಿಯಿತು. ರಂಗ ನಿಧಾನವಾಗಿ ಬಾಲವನ್ನು ಕೈಬಿಟ್ಟ. ಅಲ್ಲಿನ ದೃಶ್ಯವನ್ನು ಕಂಡು ಅವನಿಗೆ ಆಶ್ಚರ್ಯವಾಯಿತು.

ಎಲ್ಲಿ ನೋಡಿದರೂ ಚಿನ್ನದ ತರಕಾರಿಗಳು, ಹಣ್ಣುಗಳು, ಎಲೆ ಮರಗಿಡಗಳು ಇದ್ದವು. ತನ್ನ ಅಂಗವಸ್ತ್ರದಲ್ಲಿ ತುಂಬಲು ಸಾಧ್ಯವಾದಷ್ಟನ್ನು ತುಂಬಿಕೊಂಡು, ರಾತ್ರಿವರೆಗೂ ಕಾದ. ಆನೆ ಮತ್ತೆ ಭೂಮಿಯ ಮೇಲಿನ ರಂಗನ ಗದ್ದೆಗೆಂದು ಬರುವ ಹೊತ್ತಿಗೆ ಅದರ ಬಾಲ ಹಿಡಿದು ಅದರ ಜೊತೆ ಭೂಮಿಗೆ ಬಂದಿಳಿದ. ತನ್ನ ಮನೆಗೆ ಓಡೋಡಿ ಬಂದವನು ಅಲ್ಲಿ ಕಂಡ ಕೌತುಕದ ವಿಷಯಗಳನ್ನು ತನ್ನ ಹೆಂಡತಿ ಮಕ್ಕಳು ಸ್ನೇಹಿತರಿಗೆ ತಿಳಿಸಿದ. ಅವರೆಲ್ಲರೂ ತಾವೂ

ಅವುಗಳನ್ನು ನೋಡಲು ಬರುವುದಾಗಿ ಹೇಳಿ, ಒಮ್ಮೆ ತಮ್ಮನ್ನು ಕರೆದುಕೊಂಡು ಹೋಗಬೇಕೆಂದು ರಂಗನನ್ನು ಒತ್ತಾಯಮಾಡಿದರು. ರಂಗ "ಆಗಲಿ" ಎಂದು ಮಾತು ಕೊಟ್ಟನು.

ಅಂದಿನ ದಿನ ರಾತ್ರಿ ರಂಗ ತನ್ನ ಗೆಳೆಯರ ಜೊತೆ ತನ್ನ ಗದ್ದೆಯಲ್ಲಿ ಕಾಯುತ್ತಾ ಕುಳಿತಿದ್ದನು. ಸದ್ದು ಮಾಡದೇ ಕಾಯುತ್ತಿದ್ದಂತೆ ಮತ್ತೆ ಆಕಾಶದಿಂದಿಳಿದು ಬಂದ ಆನೆ, ಕಬ್ಬು ತಿಂದು ಇನ್ನೇನು ಆಕಾಶಕ್ಕೆ ಹಾರಬೇಕು ಅಷ್ಟರಲ್ಲಿ ರಂಗ ಅದರ ಬಾಲವನ್ನು ಹಿಡಿದುಕೊಂಡ. ಅವನ ಕಾಲನ್ನು ಒಬ್ಬನು, ಅವನ ಕಾಲನ್ನು ಇನ್ನೊಬ್ಬ.. ಹೀಗೇ ಉದ್ದ ಸರಪಳಿಯಲ್ಲಿ ಒಬ್ಬರನ್ನೊಬ್ಬರು ಹಿಡಿದುಕೊಂಡಿದ್ದರು. ಆನೆ ಮೇಲಕ್ಕೆ ಹೋದಂತೆ ಇವರೂ ಮೇಲೆ ಮೇಲೆ ಹೋದರು. ಎಲ್ಲರಿಗೂ ಪರಮಾಶ್ಚರ್ಯವಾಯಿತು. ಮೇಲಕ್ಕೆ ಹೋಗುತ್ತಿದ್ದಂತೆ ಒಬ್ಬನಿಗೆ ಕುತೂಹಲ ಹೆಚ್ಚಾಗಿ "ಅಲ್ಲಿದ್ದ ಚಿನ್ನದ ಕುಂಬಳಕಾಯಿ ಎಷ್ಟು ದೊಡ್ಡದಿತ್ತು ರಂಗ?" ಅಂತ ಕೇಳಿದ. ರಂಗ "ತುಂಬ ದೊಡ್ಡದಿತ್ತು" ಎಂದ. "ತುಂಬಾ ದೊಡ್ಡದು ಅಂದರೆ ಎಷ್ಟು?" ಎಂದು ಮತ್ತೆ ಕೇಳಿದ. ಏನೊಂದೂ ಯೋಚಿಸದ ರಂಗ "ಇಷ್ಟು" ಎಂದು ತನ್ನ ಎರಡೂ ಕೈಗಳನ್ನು ಅಗಲ ಮಾಡಿ ತೋರಿಸಿಯೇ ಬಿಟ್ಟ. ರಂಗ ಚಿನ್ನದ ಕುಂಬಳಕಾಯಿ ಎಷ್ಟು ದೊಡ್ಡದಿತ್ತೆಂದು ತೋರಿಸಲು ಕೈ ಬಿಟ್ಟ ತಕ್ಷಣವೇ ಅವನು, ಅವನ ಹಿಂದಿದ್ದ ಎಲ್ಲರೂ ದೊಪ್ಪೆಂದು ಎಲ್ಲರೂ ಕೆಳಗೆ ಬಿದ್ದರು.

೧. ಈ ಕಥೆ ನಿಮಗೆ ಇಷ್ಟವಾಯಿತೇ?

೨. ಈ ತರಹದ ಒಂದು ಕಾಲ್ಪನಿಕ ಕಥೆಯನ್ನು ಬರೆಯಲು ಪ್ರಯತ್ನಿಸು.





# ಗದ್ಯಪಾಠ – ೫

# ತಾಯಿಗೆ ಪತ್ರ

**ಪ್ರವೇಶಕ್ಕೂ ಮುನ್ನ...**

ನಿಮ್ಮ ಮನೆಗೆ ಪತ್ರ ಬರುತ್ತದೆಯೇ? ನೀವೂ ಯಾರಿಗಾದರೂ ಪತ್ರ ಬರೆದಿದ್ದಿರಾ? ಈ ಪತ್ರಗಳಲ್ಲಿ ಮೇಲ್ಭಾಗ, ಒಡಲು, ಮುಕ್ತಾಯದ ಸಂಬೋಧನೆ, ಸಹಿ, ವಿಳಾಸ– ಈ ಅಂಶಗಳು ಪ್ರಮುಖ. ಆಧುನಿಕ ತಂತ್ರಜ್ಞಾನದ ಹಿನ್ನೆಲೆಯಲ್ಲಿ ಪತ್ರಗಳ ಬಳಕೆ ಕಡಿಮೆಯಾದರೂ, ಪತ್ರಲೇಖನ ಇಂದಿಗೂ ಮಹತ್ವದ ಸ್ಥಾನವನ್ನು ಉಳಿಸಿಕೊಂಡಿದೆ.



ಕಸ್ತೂರ ಬಾ ವಸತಿಯುತ
ಹಿರಿಯ ಪ್ರಾಥಮಿಕ ಶಾಲೆ,
ತೆಲಗಿ, ಹರಪನಹಳ್ಳಿ ತಾಲ್ಲೂಕು,
ದಾವಣಗೆರೆ ಜಿಲ್ಲೆ.

ಪ್ರೀತಿಯ ಅಮ್ಮನಿಗೆ, ದಿನಾಂಕ: ೧೦.೦೮.೨೦೧೪

ನಿನ್ನ ಮಗಳು ಪ್ರತೀಕ್ಷಾ ಮಾಡುವ ನಮಸ್ಕಾರಗಳು.

ನಾನು ಇಲ್ಲಿ ಆರೋಗ್ಯವಾಗಿ ನೆಮ್ಮದಿಯಿಂದ ಇದ್ದೇನೆ. ನಾನು ಓದುತ್ತಿರುವ ಶಾಲೆಯ ಪರಿಸರ ಚೆನ್ನಾಗಿದೆ. ನಾನು ಚೆನ್ನಾಗಿ ಓದುತ್ತಿದ್ದೇನೆ. ನಿನ್ನ ನೆನಪು ಯಾವಾಗಲೂ ಕಾಡುತ್ತಿರುತ್ತದೆ. ನಾನು ಓದಬೇಕೆಂದು ನೀನು ಮಾಡಿದ ಕೆಲಸ ನಿನಗೆ ಸರಿ ಅನ್ನಿಸಿದರೂ, ನಿಮ್ಮಿಂದ ನಾನು ದೂರ ಇರುವುದು ನನಗೆ ಆಗಾಗ ಬೇಸರವೆನಿಸುತ್ತದೆ.

ನೀನು ಹೂ ಕಟ್ಟಿ ಮಾರಿದ ಹಣದಿಂದ ನನ್ನ ಓದಿಗೆ ಹಣ ಕೊಡುತ್ತಿರುವುದು ಅಭಿಮಾನದ ಸಂಗತಿಯಾಗಿದೆ. ಅಪ್ಪ ಬಾರಿಸುವ ಡೊಳ್ಳಿನ ಬಗ್ಗೆ ಊರಿನಲ್ಲಿದ್ದಾಗ ನನಗೆ ತಿರಸ್ಕಾರ ಇತ್ತು. ನಾಚಿಕೆ ಎನಿಸುತ್ತಿತ್ತು. ಅಪ್ಪನ ಕಲೆಯ ಬೆಲೆ ಇಂದು ಗೊತ್ತಾಗಿ, ಅವರ ಬಗ್ಗೆ ಗೌರವ, ಆದರ ಹೆಚ್ಚಾಗಿದೆ. ನನ್ನ ಕಲಿಕೆಗೆ ಅಪ್ಪನೇ ಗುರುವಾಗಿದ್ದಾರೆ. ನೀನು ಕಲಿಸಿದ ಜಾನಪದ ಹಾಡುಗಳನ್ನು ನಮ್ಮ ಶಾಲೆಯಲ್ಲಿ ಹಾಡಿದೆ. ಎಲ್ಲರೂ ಮೆಚ್ಚಿಕೊಂಡರು. ನಾನು ಕಲಿಸಿದ ನಮ್ಮ ಊರಿನ ಆಟಗಳನ್ನು ಎಲ್ಲರೂ ಆಡುತ್ತಾರೆ. ನಮ್ಮ ಊರಿಗೆ ಬರಬೇಕೆಂದು ಆಸೆ ಪಡುತ್ತಾರೆ.

ಅಮ್ಮ ನಾನು ಡೊಳ್ಳುಕುಣಿತದ ನಾಯಕಿಯಾಗಿದ್ದೇನೆ. ನಮ್ಮ ತಂಡ ದೆಹಲಿಗೆ ಹೋಗುತ್ತಲಿದೆ. ದೆಹಲಿಯ ಡೊಳ್ಳುಕುಣಿತದ ಪ್ರದರ್ಶನದಿಂದ ಬಂದ ನಂತರ ಮತ್ತೆ ಕಾಗದ ಬರೆಯುತ್ತೇನೆ. ಪದಕ ಗೆದ್ದು ತಂದೇ ತರುತ್ತೇನೆ. ಅಕ್ಕಳಿಗೆ, ತಮ್ಮನಿಗೆ ನನ್ನ ನೆನಪುಗಳನ್ನು ತಿಳಿಸಿ.

ಇಂತಿ ನಮಸ್ಕಾರಗಳು

ನಿಮ್ಮ ಪ್ರೀತಿಯ ಮಗಳು
**ಪ್ರತೀಕ್ಷಾ**
ಏಳನೆಯ ತರಗತಿ ಬಿ–ವಿಭಾಗ

# ಮರು ಓಲೆ



ಶ್ರೀಮತಿ ಭಾಗ್ಯ
ಸಾಲುಮರದ ಬೀದಿ, ಬಿಡದಿ,
ರಾಮನಗರ ತಾಲ್ಲೂಕು,
ದಿನಾಂಕ: ೨೦.೦೮.೨೦೧೪

ಪ್ರೀತಿಯ ಪ್ರತೀಕ್ಷಾಳಿಗೆ,

ನಿನ್ನ ತಾಯಿ ಮಾಡುವ ಆಶೀರ್ವಾದಗಳು.

ನಿನ್ನ ಕಾಗದ ತಲುಪಿದ್ದು, ನಮಗೆಲ್ಲ ಸಂತೋಷವಾಗಿದೆ. ಮನೆಯಲ್ಲಿ ಎಲ್ಲರೂ ಆರೋಗ್ಯವಾಗಿದ್ದಾರೆ. ಓದಿನಲ್ಲಿ ಜಾಣೆಯಾದ ನಿನ್ನನ್ನು ಓದಿಸುವುದು ಕಷ್ಟವಾದರೂ, ನಿನ್ನ ಉತ್ತಮ ಓದು ನಮಗೆ ಖುಷಿ ತಂದಿದೆ. ನಿನ್ನ ಓದಿನಿಂದ ನಮ್ಮ ಹಳ್ಳಿಗೆ ಒಳ್ಳೆಯ ಹೆಸರು ಬರುತ್ತದೆ ಎಂದು ನಂಬಿದ್ದೇವೆ. ನೀನು ಡೊಳ್ಳುಕುಣಿತದ ಕಲೆಯ ಪ್ರದರ್ಶನಕ್ಕಾಗಿ ದೆಹಲಿಗೆ ಹೋಗುತ್ತಿರುವುದು ಅಪ್ಪನಿಗಂತೂ ತುಂಬಾ ಸಂತೋಷವಾಗಿದೆ. ಅಪ್ಪ ನಿನ್ನ ಆರೋಗ್ಯ – ಓದಿನ ಬಗ್ಗೆ ಹೆಚ್ಚಿನ ಗಮನ ತೆಗೆದುಕೊಳ್ಳುವಂತೆ ತಿಳಿಸಿದ್ದಾರೆ.

ನೀನು ಡೊಳ್ಳು ಕುಣಿತ ಸಾಧನೆ ಮಾಡುತ್ತಿರುವ ಬಗ್ಗೆ, ನಿನ್ನ ಓದಿನ ಬಗ್ಗೆ ಅಕ್ಕ–ಪಕ್ಕದವರೆಲ್ಲರಿಗೂ ನೆಂಟರಿಷ್ಟರೆಲ್ಲರಿಗೂ ತಿಳಿಸಿದ್ದೇನೆ. ನಮ್ಮ ಜಾನಪದ ಕಲೆಯನ್ನು ಮುಂದುವರೆಸಿಕೊಂಡು ಹೋಗುತ್ತಿರುವುದು, ನಮ್ಮೆಲ್ಲರಿಗೂ ಸಂತೋಷ ತಂದಿದೆ. ನಿನ್ನ ತಮ್ಮನು ತನಗೂ ಡೊಳ್ಳುಕುಣಿತ ಕಲಿಸುಕೊಡುವಂತೆ ಅಪ್ಪನನ್ನು ಪೀಡಿಸುತ್ತಿದ್ದಾನೆ. ಡೊಳ್ಳು ಕುಣಿತ ಕಲಿತು ಈ ಸಲದ ಜಾತ್ರೆಯಲ್ಲಿ ಪ್ರದರ್ಶನ ಮಾಡುತ್ತೇನೆಂದು ಬಯಸಿದ್ದಾನೆ.

ಡೊಳ್ಳು ಕುಣಿತ ಕಲೆ ಎಂದಾಗ ಇದು ಹಳ್ಳಿಯ ವಾದ್ಯ ಎಂದ ನೀನು ಅದೇ ಕಲೆಯ ಕಾರಣವಾಗಿ ದೆಹಲಿಗೆ ಹೋಗುತ್ತಿರುವೆ. ನಿನಗೆ ಶುಭವಾಗಲಿ. ನಮ್ಮ ಊರು, ನಮ್ಮ ಜನ, ನಮ್ಮ ಆಟ, ನಮ್ಮ ಕಲೆಯ ಬಗ್ಗೆ ಅಭಿಮಾನ ಇಟ್ಟುಕೊಂಡಿರುವುದು ನಿಜವಾಗಿಯೂ ಹೆಮ್ಮೆ ಎನಿಸುತ್ತದೆ.

ಆಶೀರ್ವಾದಗಳೊಂದಿಗೆ

ಇಂತಿ ನಿನ್ನ ಪ್ರೀತಿಯ ಅಮ್ಮ
**ಭಾಗ್ಯ**

**ಕ್ಷೇತ್ರ :** ಓದುವುದು

**ಸಾಮರ್ಥ್ಯ :** ಕೈಬರಹದ ಬರವಣಿಗೆಯನ್ನು ಓದುವುದು

## ಓದಿ ತಿಳಿಯಿರಿ

ಕುಶಲ – ಕ್ಷೇಮ; ನೆಮ್ಮದಿ – ಸಂತೃಪ್ತಿ; ಕೊರತೆ – ಕಡಿಮೆ ಇಲ್ಲದಿರುವುದು; ಅಂದ – ಸುಂದರ; ತವರು –ತಾಯಿಯ ಮನೆ; ಹಂಬಲ – ತವಕ, ಒತ್ತಾಸೆ; ಕದಡು – ಕಲಕು, ಚಂಚಲ; ನೋವು – ಸಂಕಟ

## ಗಮನಿಸಿ ತಿಳಿಯಿರಿ

ಡೊಳ್ಳು – ಒಂದು ಪ್ರಕಾರದ ಚರ್ಮವಾದ್ಯ.

## ಅಭ್ಯಾಸ

**ಅ) ಈ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ಪ್ರತೀಕ್ಷಾ ಯಾರಿಗೆ ಪತ್ರ ಬರೆದಿದ್ದಾಳೆ?

______________________________

೨. ಪ್ರತೀಕ್ಷಾಳಿಗೆ ಯಾರ ಕೊರತೆ ಕಾಡುತ್ತಿದೆ?

______________________________

೩. ತಂದೆ ಯಾವ ವಾದ್ಯವನ್ನು ನುಡಿಸುತ್ತಿದ್ದ?

______________________________

೪. ಪ್ರತೀಕ್ಷಾ ದೆಹಲಿಗೆ ಹೋಗಲು ಕಾರಣವೇನು?

______________________________

**ಆ) ಈ ಪ್ರಶ್ನೆಗಳಿಗೆ ಉತ್ತರಿಸಿ.**

೧. ಪ್ರತಿಕ್ಷಾಳಿಗೆ ಯಾವುದು ಅಭಿಮಾನದ ಸಂಗತಿ?

______________________________

______________________________

೨. ತಂದೆ ಡೊಳ್ಳು ನುಡಿಸುವುದು ನೋಡಿ ಮಗಳು ಏಕೆ ನಾಚಿಕೆ ಪಟ್ಟುಕೊಳ್ಳುತ್ತಿದ್ದಳು?

______________________________________________

______________________________________________

೩. ತಾಯಿಯ ಹೆಮ್ಮೆಗೆ ಕಾರಣವೇನು?

______________________________________________

______________________________________________

## ಸಾಮರ್ಥ್ಯ ಆಧಾರಿತ ಅಭ್ಯಾಸ

**ಅ) ಈ ಕೆಳಗಿನ ಬರೆಹವನ್ನು ಓದಿರಿ.**

ಬರೆವಣಿಗೆ – ೧ ನಿನ್ನ ಕಾಗದ ತಲುಪಿದ್ದು, ನಮಗೆಲ್ಲ ಸಂತೋಷವಾಗಿದೆ.

ಬರೆವಣಿಗೆ – ೨ ನಿನ್ನ ಉತ್ತಮ ಓದು ನಮಗೆ ಖುಷಿ ತಂದಿದೆ.

ಬರೆವಣಿಗೆ – ೩ ನಾನು ಓದುತ್ತಿರುವ ಶಾಲೆಯ ಪರಿಸರ ಚೆನ್ನಾಗಿದೆ.

**ಆ) ಈ ಬರವಣಿಗೆಯನ್ನು ಶಿಕ್ಷಕರ ಸಹಾಯದಿಂದ ಓದಿ, ಅರ್ಥೈಸಿಕೊಂಡು ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.**

ಕಾಲದ ಸದುಪಯೋಗವನ್ನು ಬಲ್ಲವರೆಲ್ಲರೂ ಗಡಿಯಾರದ ಉಪಯೋಗವನ್ನು ಬಲ್ಲರು. ನೂರಾರು ವರ್ಷಗಳ ಹಿಂದೆ ಗಡಿಯಾರಗಳು ಇರಲಿಲ್ಲ. ಆಗ ಕಾಲವನ್ನು ಕಂಡು ಹಿಡಿಯುವುದೇ ಕಷ್ಟವಾಗಿದ್ದಿತು. ಬಹಳ ಹಿಂದೆ ಜನರು ಸೂರ್ಯನ ಚಲನೆ ಆಧಾರದಿಂದ ಕಾಲವನ್ನು ಕಂಡುಹಿಡಿಯುತ್ತಿದ್ದರು. ಬರಬರುತ್ತ ಛಾಯಾಯಂತ್ರದ ಉಪಯೋಗವು ರೂಢಿಗೆ ಬಂದಿತು. ಬಿಸಿಲು ಕಾಲಕ್ಕೆ ಮಾತ್ರ ಛಾಯಾಯಂತ್ರವು ಉಪಯೋಗವಾಗಿತ್ತು. ಮೋಡ ಕಟ್ಟಿದ ದಿನಗಳಲ್ಲಿ ಇದರಿಂದ ಪ್ರಯೋಜನವಿರಲಿಲ್ಲ.

೧. ಗಡಿಯಾರದ ಉಪಯೋಗವನ್ನು ಯಾರು ಬಲ್ಲರು?

೨. ನೂರಾರು ವರ್ಷಗಳ ಹಿಂದೆ ಗಡಿಯಾರಗಳು ಇದ್ದವೇ?

೩. ಗಡಿಯಾರಗಳು ಇಲ್ಲದಿದ್ದ ಕಾಲದಲ್ಲಿ ಯಾವುದರ ಸಹಾಯದಿಂದ ಕಾಲವನ್ನು ಕಂಡುಹಿಡಿಯುತ್ತಿದ್ದರು?

೪. ಛಾಯಾಯಂತ್ರವು ಯಾವ ಕಾಲದಲ್ಲಿ ಮಾತ್ರ ಉಪಯೋಗಕರವಾಗಿತ್ತು?

## ಭಾಷಾ ಚಟುವಟಿಕೆ

**ಅ) ಈ ವಾಕ್ಯಗಳಲ್ಲಿ ಅಡಿಗೆರೆ ಹಾಕಿರುವ ನಾಮಪದಗಳನ್ನು ಗಮನಿಸಿ.**

೧. ರೂಪ ಸ್ವಲ್ಪ ಬೇಗ ಬಂದಳು.

೨. ಜಿಂಕೆ ಚಂಗನೆ ಜಿಗಿಯಿತು.

೩. ಗಡಿಯಾರ ಕೆಟ್ಟು ಹೋಗಿದೆ.

೪. ನಾನು ಮೈಸೂರಿಗೆ ಹೋಗುತ್ತೇನೆ.

**ಆ) ಈ ವಾಕ್ಯಗಳಲ್ಲಿ ನಾಮಪದಗಳಿಗೆ ಅಡಿಗೆರೆ ಹಾಕಿರಿ.**

೧. ಶಿಲ್ಪ ಹಾಡುತ್ತಿದ್ದಾಳೆ.

೨. ನಾಯಿ ಓಡಿಹೋಯಿತು.

೩. ಕಲ್ಲುಬಂಡೆ ಉರುಳಿ ಹೋಯಿತು.

೪. ಕಾರವಾರ ನಮ್ಮನ್ನು ಕೈಬೀಸಿ ಕರೆಯುತ್ತದೆ.

## ಅಭ್ಯಾಸ ಚಟುವಟಿಕೆ

**ಅ) ನಿಮ್ಮ ಶಿಕ್ಷಕರ ನೆರವಿನಿಂದ ದೂರದ ಊರಿನ ನಿಮ್ಮ ಸಂಬಂಧಿಕರಿಗೆ ಪತ್ರ ಬರೆಯಿರಿ.**



## ವ್ಯಾಕರಣಾಂಶ

### ಭಾಗ – ೧

**ಅ. ಈ ಹೇಳಿಕೆಗಳಿಗೆ ಸರಿ ಹೊಂದುವ ಸೂಕ್ತ ಉತ್ತರವನ್ನು ಗುರುತಿಸಿ.**

೧. ಸಂಯುಕ್ತಾಕ್ಷರಗಳಲ್ಲಿರುವ ವಿಧಗಳು

ಅ. ನಾಲ್ಕು ಆ. ಎರಡು ಇ. ಮೂರು ಈ. ಒಂದು

೨. ಸಜಾತೀಯ ಸಂಯುಕ್ತಾಕ್ಷರಗಳಿಗೆ ಉದಾಹರಣೆ

ಅ. ಚಂದ್ರ ಆ. ಸ್ವರ ಇ. ಅಕ್ಕ ಈ. ಭಕ್ತ

೩. ವಿಜಾತೀಯ ಸಂಯುಕ್ತಾಕ್ಷರಗಳಿಗೆ ಉದಾಹರಣೆ

ಅ. ಬಸಪ್ಪ ಆ. ದೊಡ್ಡಪ್ಪ ಇ. ಅಕ್ಕ ಈ. ಸಂಗ್ರಹ

## ಭಾಗ – ೨

**ಲೇಖನ ಚಿಹ್ನೆಗಳನ್ನು ಗಮನಿಸಿ.**

೧. ಪೂರ್ಣ ವಿರಾಮ (.)

೨. ಅಲ್ಪ ವಿರಾಮ (,)

೩. ಅರ್ಧ ವಿರಾಮ (;)

೪. ಪ್ರಶ್ನಾರ್ಥಕ ಚಿಹ್ನೆ (?)

೫. ಭಾವ ಸೂಚಕ (!)

೬. ಉದ್ಧರಣ ಚಿಹ್ನೆ (" ") (' ')

**ಈ ವಾಕ್ಯಗಳಿಗೆ ಸೂಕ್ತ ಲೇಖನ ಚಿಹ್ನೆ ಹಾಕಿ.**

೧. ಅಬ್ಬಾ ಎಷ್ಟೊಂದು ಸುಂದರವಾದ ಕಟ್ಟಡ

೨. ನಮ್ಮ ದೇಶದ ಹೆಸರೇನು

೩. ನಾನು ದಿನಾಲು ಬೆಳಗ್ಗೆ ಬೇಗನೆ ಏಳುತ್ತೇನೆ ಎಂದು ಕಮಲ ಹೇಳಿದಳು

೪. ನಮ್ಮ ರಾಷ್ಟ್ರಧ್ವಜದಲ್ಲಿ ಕೇಸರಿ ಬಿಳಿ ಹಸಿರು ಬಣ್ಣದ ಪಟ್ಟಿಗಳಿವೆ



### ಚಟುವಟಿಕೆ

**ಈ ಕೆಳಗಿನ ನಮೂನೆಗಳ ಅಂಚೆಪತ್ರ / ಲಕೋಟೆಗಳನ್ನು ಸಂಗ್ರಹಿಸಿ, ನಿನ್ನ ಸ್ನೇಹಿತರಿಗೆ ಪತ್ರವನ್ನು ಬರೆ.**










ಪೂರಕ ಪಾಠ

# ಗುಬ್ಬಿ ಮತ್ತು ನಾನು

ಗುಬ್ಬಿಯ ನೋಡಿದೆ
ಗುಬ್ಬಿಯ ನೋಡಿದೆ
ಹಬ್ಬಿದ ಬಳ್ಳಿಯ
ತಬ್ಬಿದ ಗೂಡಲಿ
ಗುಬ್ಬಿಯ ನೋಡಿದೆ ॥೧॥

ಹಿತ್ತಲ ಗಿಡದಲಿ
ಮುಂದಲ ಮರದಲಿ
ಆಡಿದ ಗುಬ್ಬಿ
ಕಾಳನು ಆಯುತ
ಹುಳವನು ಹೆಕ್ಕುತ
ನೋಡಿದ ಗುಬ್ಬಿ
ಎಲ್ಲಿಗೆ ಹೋಗಿತ್ತೋ
ಭಣ ಭಣ ಎನ್ನುತ್ತಿತ್ತೋ ॥೨॥

ಯಾರೋ ಅಂದರು
ನಗರದಲ್ಲಿತ್ತು
ಗಾಜಿನ ಕಿಟಕಿಗೆ ಬಡಿಯಿತೆ ಕತ್ತು
ನೀರಿನ ಬವಣೆಗೆ ಪರಿತಪಿಸಿತ್ತೆ ॥೩॥

ಶಬ್ದದ ಸಂತೆಗೆ
ಹೆದರಿದ ಗುಬ್ಬಿ
ಹದ್ದಿನ ಕಣ್ಣಿಗೆ
ಕೊರಗಿದ ಗುಬ್ಬಿ
ಹೊರಳಿತು ಮರಳಿತು
ಊರಿಗೆ ಗುಬ್ಬಿ ॥೪॥

ಕೆರೆ ದಡದಲ್ಲಿದೆ
ಅದರದೆ ಊರು
ಮರಿಗಳ ಹಾಡಿಗೆ
ಸಂಭ್ರಮ ತೇರು

ದೇವರ ಗುಡಿಯಲಿ
ಸೂರಿನ ಮರೆಯಲಿ
ಚಿವ್ ಚಿವ್ ಗುಬ್ಬಿ ॥೫॥

ಸಡಗರ ಹರಡಿದೆ
ಹಾಡನು ತಬ್ಬಿ
ನೀಲಿಗೆ ಹಾರಿದೆ
ನನ್ನೆದೆ ಉಬ್ಬಿ ॥೬॥

– ಚಂದ್ರಶೇಖರ ತಾಳ್ಯ



**ಅ. ಈ ಪದ್ಯ ಓದಿ ಪ್ರಶ್ನೆಗಳಿಗೆ ಉತ್ತರಿಸಿರಿ.**

೧. ಗುಬ್ಬಿ ಎಲ್ಲಿಗೆ ಹೋಗಿತ್ತು?

೨. ಗುಬ್ಬಿ ಪುನಃ ತನ್ನ ಗೂಡಿಗೆ ಮರಳಲು ಕಾರಣವೇನು?

೩. ಗುಬ್ಬಿಯ ಊರು ಎಲ್ಲಿದೆ?

೪. ಕವಿಗೆ ಏಕೆ ಸಂತಸವಾಯಿತು?

## ಗದ್ಯಪಾಠ – ೬

# ನಿಟ್ಟೂರು ಶ್ರೀನಿವಾಸರಾಯರು

**ಪ್ರವೇಶಕ್ಕೂ ಮುನ್ನ...**

ನಮ್ಮ ಕನ್ನಡ ನಾಡಿನ ಏಕತೆಗಾಗಿ ಏಕೀಕರಣಕ್ಕಾಗಿ ಶ್ರಮಿಸಿದ ಅನೇಕ ಮಹನೀಯರನ್ನು ನಾವು ಸ್ಮರಿಸುತ್ತಿರಬೇಕು. ವಿಜ್ಞಾನ, ಗಣಿತ, ಕಾನೂನು ವಿಷಯಗಳಲ್ಲಿ ಪರಿಣಿತರಾಗಿದ್ದವರು, ಅಡ್ವಕೇಟ್ ಜನರಲ್ ಆಗಿ ಮುಖ್ಯ ನ್ಯಾಯಮೂರ್ತಿಗಳಾಗಿ ದೇಶ ಸೇವೆ ಮತ್ತು ನಾಡಸೇವೆಗೆ ತಮ್ಮನ್ನು ಸಮರ್ಪಿಸಿಕೊಂಡವರ ಸಾಧನೆಯನ್ನು ತಿಳಿಸುವದೇ ಈ ಗದ್ಯ ಭಾಗದ ಆಶಯವಾಗಿದೆ.





'ಬ್ರಿಟೀಷರೇ ಭಾರತ ಬಿಟ್ಟು ತೊಲಗಿ' – ಎಂಬ ಸ್ವಾತಂತ್ರ್ಯ ಚಳುವಳಿಯಲ್ಲಿ ಅನೇಕ ಯುವಕರು ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ಹೋರಾಟಕ್ಕೆ ಮುಂದಾದರು. ಶಾಲೆ, ಕಾಲೇಜುಗಳನ್ನು ತೊರೆದರು. ವಿದೇಶೀ ಬಟ್ಟೆಗಳನ್ನು ಸುಟ್ಟುಹಾಕಿದರು. ಖಾದಿ ಬಟ್ಟೆಯನ್ನು ತೊಡಲು ಪ್ರಾರಂಭಿಸಿದರು. ಅಂತಹ ಅನೇಕ ಯುವಕರಲ್ಲಿ ಕರ್ನಾಟಕದ ನಿಟ್ಟೂರು ಶ್ರೀನಿವಾಸರಾಯರು ಒಬ್ಬರು.

ಮುಖ್ಯಗುರುಗಳಾದ ನಿಟ್ಟೂರು ಶಾಮಣ್ಣ ಹಾಗೂ ಸೀತಮ್ಮ ಅವರ ಮಗನೇ ನಿಟ್ಟೂರು ಶ್ರೀನಿವಾಸರಾಯರು. ನಿಟ್ಟೂರು ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ಒಂದು ಗ್ರಾಮ. ಶ್ರೀನಿವಾಸರಾಯರ ಪ್ರಾಥಮಿಕ ವಿದ್ಯಾಭ್ಯಾಸ ಹೊಸದುರ್ಗ, ಚಳ್ಳಕೆರೆ, ಚಿತ್ರದುರ್ಗ, ಶಿವಮೊಗ್ಗದಲ್ಲಿ ನಡೆಯಿತು. ಇವರು ನ್ಯಾಷನಲ್ ಹೈಸ್ಕೂಲ್‌ನಲ್ಲಿ ವಿಜ್ಞಾನ ಮತ್ತು ಗಣಿತ ಶಿಕ್ಷಕರಾಗಿ ಸೇರಿಕೊಂಡಿದ್ದರು. ಮುಂದಿನ ವ್ಯಾಸಂಗಕ್ಕಾಗಿ ಮದ್ರಾಸ್ ಕಾನೂನು ಕಾಲೇಜಿನಲ್ಲಿ ಪ್ರವೇಶ ಪಡೆದು ತಮ್ಮ ಪದವಿ ಶಿಕ್ಷಣವನ್ನು ಮುಗಿಸಿದರು.

ನಿಟ್ಟೂರು ಶ್ರೀನಿವಾಸರಾಯರು ತಮ್ಮ ಹದಿನೆಂಟನೆಯ ವಯಸ್ಸಿನಲ್ಲಿಯೇ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ಗೆ ಸೇರಿಕೊಂಡರು. ೧೯೩೦ರಿಂದ ೧೯೪೦ರವರೆಗೆ ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಇವರು ೧೯೩೨ರಲ್ಲಿ ಮೈಸೂರು ಕಾಂಗ್ರೆಸ್ ಮತ್ತು ಅಸಹಕಾರ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡರು.

೧೯೪೨ ಕ್ವಿಟ್ ಇಂಡಿಯಾ ಚಳುವಳಿಯ ಹೋರಾಟದಲ್ಲಿ ಭಾಗವಹಿಸಿ ಕಾಂಗ್ರೆಸ್ ನಾಯಕರಾದ ಆರ್.ಆರ್.ದಿವಾಕರ್, ಕಮಲಾದೇವಿ ಚಟ್ಟೋಪಾಧ್ಯಾಯ, ಯು.ಎಸ್. ಮಲ್ಯ ಅವರಿಗೆ ಆಶ್ರಯವನ್ನು ನೀಡಿದರು. ಲಾ ಪದವಿಯನ್ನು ಪಡೆದ ನಂತರ ಬೆಂಗಳೂರಿಗೆ ಮರಳಿ ನ್ಯಾಯವಾದಿಯಾಗಿ ಕಾರ್ಯ ಪ್ರಾರಂಭಿಸಿದರು. ಇವರನ್ನು ರಾಜ್ಯ ನ್ಯಾಯವಾದಿಗಳ ಸಂಘದ ಅಧ್ಯಕ್ಷರನ್ನಾಗಿ ನೇಮಕ ಮಾಡಲಾಯಿತು. ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಕೆಂಗಲ್ ಹನುಮಂತಯ್ಯನವರು ಇವರ ಕಾರ್ಯದಕ್ಷತೆಯನ್ನು ಮನಗಂಡು ಅಡ್ವೋಕೇಟ್ ಜನರಲ್ ಆಗಿ ನೇಮಕ ಮಾಡಿದರು. ಕರ್ನಾಟಕ ಏಕೀಕರಣದ ನಂತರ ಉಚ್ಛ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯಾಗಿ ನೇಮಕಗೊಂಡರು.

೧೯೨೭ರಲ್ಲಿ ಗಾಂಧೀಜಿಯವರು ಬೆಂಗಳೂರಿಗೆ ಬಂದಾಗ ಅವರ ಆತ್ಮಚರಿತ್ರೆಯನ್ನು ಕನ್ನಡಕ್ಕೆ ತರಲು ರಾಯರು ಅವರಿಂದ ಅನುಮತಿ ಪಡೆದರು. ವಿಶ್ವಕರ್ನಾಟಕ, ಲೋಕಮಾತಾ ಪತ್ರಿಕೆಗಳು ಇದನ್ನು ಪ್ರಕಟಿಸಿದವು. ಗಾಂಧೀಜಿಯವರ ಆತ್ಮಚರಿತ್ರೆಯನ್ನು ಕನ್ನಡದಲ್ಲಿ ಬರೆದ ರಾಯರು ಅದಕ್ಕೆ ಸತ್ಯಶೋಧನ ಎಂದು ಹೆಸರಿಟ್ಟರು. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣದ ಮಾಧ್ಯಮವಾಗಿ ಕನ್ನಡ ಭಾಷೆಯೇ ಇರಬೇಕೆಂದು ಇವರ ಆಗ್ರಹವಾಗಿತ್ತು. ಸ್ವದೇಶಿ ವಸ್ತುಗಳ ಬಳಕೆ ಹೆಚ್ಚು ಹೆಚ್ಚು ಮಾಡಬೇಕೆಂದು ತಿಳಿಸುತ್ತಾ ಖಾದಿ ಬಳಕೆಗೆ ಹೆಚ್ಚು ಪ್ರಾಮುಖ್ಯತೆ ನೀಡಿದರು. ೧೯೨೭ರಲ್ಲಿ ರಾಯರು ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರಾದರು. ಕನ್ನಡ ಪುಸ್ತಕಗಳ ಪ್ರಕಾಶಕರಾದರು. ಗಾಂಧಿ ಶಾಂತಿ ಪ್ರತಿಷ್ಠಾನಕ್ಕೆ ಅಧ್ಯಕ್ಷರಾದರು. ಸತ್ಯಶೋಧನ ಎಂಬ ಪ್ರಕಟಣಾ ಮಂದಿರದ ಸ್ಥಾಪಕರಾದರು. ನಿಟ್ಟೂರು ಅವರು ಶಿವರಾಮ ಕಾರಂತರ 'ಬಾಲಪ್ರಪಂಚ'ದ ಮುದ್ರಕರಾದರು. ಕುವೆಂಪು, ಗೊರೂರು, ಜಿ.ಪಿ.ರಾಜರತ್ನಂ ಮೊದಲಾದವರ ಪುಸ್ತಕಗಳನ್ನು ಪ್ರಕಟಿಸಿದರು. ಸಮಾಜಸೇವೆಗಳಿಗೆ ಡಿ.ವಿ.ಜಿಯವರು ಸ್ಥಾಪಿಸಿದ ಗೋಖಲೆ ವಿಚಾರ ಸಂಕಿರಣದ ಸಂಸ್ಥೆಯೊಂದಿಗೆ ಕೈಜೋಡಿಸಿದರು. ದೇಶಸೇವೆ ಹಾಗೂ ಕನ್ನಡ ಸೇವೆಯಲ್ಲಿ ನಿಟ್ಟೂರು ಶ್ರೀನಿವಾಸರಾಯರ ಹೆಸರು ಇಂದಿಗೂ ಅಚ್ಚಳಿಯದೆ ಉಳಿದಿದೆ.

**ಕ್ಷೇತ್ರ :** ಓದುವುದು

**ಸಾಮರ್ಥ್ಯ :** ಸುಮಾರು ೨೦೦೦ ಪದಗಳನ್ನು ಓದಿ ಗ್ರಹಿಸುವುದು.

**ಆಶಯ :** ನಾಡು-ನುಡಿಯ ಬಗ್ಗೆ ಅಭಿಮಾನ ಹಾಗೂ ಮಾತೃಭಾಷೆಯ ಬಗ್ಗೆ ಪ್ರೀತಿಯನ್ನು ಇಟ್ಟುಕೊಂಡು ಕಾರ್ಯದಕ್ಷತೆಯಿಂದ ಮತ್ತು ಬುದ್ಧಿವಂತಿಕೆಯಿಂದ ಕಾರ್ಯನಿರ್ವಹಿಸಿದಾಗ ಯಶಸ್ಸು ಖಂಡಿತ.

## ಓದಿ ತಿಳಿಯಿರಿ

ಚಳುವಳಿ – ಆಂದೋಲನ; ಪ್ರಭಾವ– ಪ್ರೇರಣೆ; ತೊರೆ– ಬಿಡು; ತೊಡು– ಧರಿಸು; ವ್ಯಾಸಂಗ – ಅಧ್ಯಯನ; ಆಶ್ರಯ–ಆಸರೆ; ಮನಗಂಡು – ತಿಳಿದುಕೊಂಡು; ಸ್ವದೇಶಿ– ದೇಶೀಯ; ಕೈಜೋಡಿಸು – ಜೊತೆಯಾಗು. ಆಗ್ರಹ – ಒತ್ತಾಯ; ಅಚ್ಚಳಿಯದೆ – ಅಳಿಯದ, ಹಾಳಾಗದ.

## ಗಮನಿಸಿ ತಿಳಿಯಿರಿ

ಅಸಹಕಾರ ಆಂದೋಲನ – ಬ್ರಿಟಿಷ್ ಸರ್ಕಾರದ ವಿರುದ್ಧ ಅಸಹಕಾರ ಚಳುವಳಿ

ಕ್ವಿಟ್ ಇಂಡಿಯಾ ಚಳುವಳಿ – ೧೯೪೨ರಲ್ಲಿ ಬ್ರಿಟಿಷರನ್ನು ಭಾರತ ಬಿಟ್ಟು ತೊಲಗಿಸಲು ಕೈಗೊಂಡ ಚಳುವಳಿ.

ಕರ್ನಾಟಕದ ಏಕೀಕರಣ – ೧೯೫೬ರಲ್ಲಿ ಹರಿದು ಹಂಚಿಹೋಗಿದ್ದ ಕರ್ನಾಟಕದ ಭೂಭಾಗವನ್ನು ಒಂದೆಡೆ ಸೇರುವಂತೆ ಮಾಡಿದ ಚಳುವಳಿ.

ಆತ್ಮಚರಿತ್ರೆ – ವ್ಯಕ್ತಿ ತನ್ನ ಜೀವನದ ಬಗ್ಗೆ ತಾನೇ ಬರೆದುಕೊಂಡ ವಿವರ.

## ಅಭ್ಯಾಸ



**ಅ) ಈ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ಯುವಕರು ಯಾರ ಪ್ರಭಾವಕ್ಕೆ ಒಳಗಾದರು?

______________________________

೨. ನಿಟ್ಟೂರು ಶ್ರೀನಿವಾಸರಾಯರ ತಂದೆ ತಾಯಿಯ ಹೆಸರೇನು?

______________________________

೩. ನಿಟ್ಟೂರು ಶ್ರೀನಿವಾಸರಾಯರ ಜನ್ಮಸ್ಥಳ ಯಾವುದು?

______________________________

೪. ನಿಟ್ಟೂರು ಅವರು ಯಾವ ಹೈಸ್ಕೂಲಿನಲ್ಲಿ ಶಿಕ್ಷಕ ವೃತ್ತಿಯನ್ನು ಪ್ರಾರಂಭಿಸಿದರು?

______________________________

೫. ಸತ್ಯಶೋಧನ ಯಾರ ಆತ್ಮಚರಿತ್ರೆಯ ಅನುವಾದವಾಗಿದೆ?

______________________________

ಆ) ಬಿಟ್ಟಿರುವ ಸ್ಥಳಗಳನ್ನು ಸೂಕ್ತಪದಗಳಿಂದ ಭರ್ತಿ ಮಾಡಿರಿ.

೧. ಬ್ರಿಟೀಷರೇ ________________ ಬಿಟ್ಟು ತೊಲಗಿ.

೨. ಗಾಂಧೀಜಿಯವರ ಆತ್ಮಚರಿತ್ರೆಗೆ ರಾಯರು ________________ ಎಂದು ಹೆಸರಿಟ್ಟರು.

೩. ನಿಟ್ಟೂರು ಅವರು ಶಿವರಾಮ ಕಾರಂತರ ________________ ದ ಮುದ್ರಕರಾದರು.

ಇ) ಈ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿ ಬರೆಯಿರಿ.

೧. ಮನಗಾಣು : ________________________________________

೨. ಹೋರಾಟಕ್ಕೆ ಮುಂದಾಗು : ________________________________________

೩. ಸಕ್ರಿಯವಾಗಿ ಪಾಲ್ಗೊಳ್ಳು : ________________________________________

ಈ) ಹಿಂದುಮುಂದಾಗಿರುವ ಪದಗಳನ್ನು ಅರ್ಥಪೂರ್ಣವಾಕ್ಯ ಆಗುವಂತೆ ಕ್ರಮದಲ್ಲಿ ಬರೆಯಿರಿ.

೧. ತೊರೆದರು ಕಾಲೇಜುಗಳನ್ನು ಶಾಲೆ.

೨. ಪ್ರಕಟಣಾ ಸತ್ಯಶೋಧನ ಸ್ಥಾಪಕರಾದರು ಎಂಬ ಮಂದಿರದ.

೩. ಮುಖ್ಯ ನ್ಯಾಯಮೂರ್ತಿಯಾಗಿ ನೇಮಕಗೊಂಡರು ಉಚ್ಚ ನ್ಯಾಯಾಲಯದ

## ಭಾಷಾ ಚಟುವಟಿಕೆ

ಅ) ಈ ಕೆಳಗಿನ ವಾಕ್ಯಗಳನ್ನು ಗಮನಿಸಿರಿ. ಮಾದರಿಯಂತೆ ಬದಲಾಯಿಸಿರಿ.

ಮಾದರಿ :

| | |
|---|---|
| ೧. ರಾಕೇಶನು ಹೋದನು. | ೧. ರಾಜೇಶನು ____________ |
| ೨. ರಾಕೇಶನು ಹೋಗುತ್ತಾನೆ. | ೨. ರಾಜೇಶನು ____________ |
| ೩. ರಾಕೇಶನು ಹೋಗುವನು. | ೩. ರಾಜೇಶನು ____________ |

ಲಲಿತಾ ಬರೆದಳು. : ಮಾದರಿ : ನಾಯಿಯು ರೊಟ್ಟಿಯನ್ನು ತಿಂದಿತು.

| | |
|---|---|
| ೧. ಲಲಿತಾ ____________ | ೧. ನಾಯಿಯು ರೊಟ್ಟಿಯನ್ನು ____________ |
| ೨. ಲಲಿತಾ ____________ | ೨. ನಾಯಿಯು ರೊಟ್ಟಿಯನ್ನು ____________ |
| ೩. ಲಲಿತಾ ____________ | ೩. ನಾಯಿಯು ರೊಟ್ಟಿಯನ್ನು ____________ |

## ಚಟುವಟಿಕೆ

೧. ಕರ್ನಾಟಕದ ಏಕೀಕರಣ ಚಳುವಳಿಯ ಬಗ್ಗೆ ನಿಮ್ಮ ಶಿಕ್ಷಕರ ಸಹಾಯದಿಂದ ಲಘು ಟಿಪ್ಪಣಿ ಬರೆಯಿರಿ.

೨. ಈ ಪಾಠದಲ್ಲಿ ಬಂದಿರುವ ಇತರೆ ಸ್ವಾತಂತ್ರ್ಯ ಹೋರಾಟಗಾರರ ಹಾಗೂ ಸಾಹಿತಿಗಳ ಭಾವಚಿತ್ರ ಸಂಗ್ರಹಿಸಿರಿ.

## ವ್ಯಾಕರಣಾಂಶ

### ಭಾಗ – ೧

* ರೂಢಿಯಿಂದ ಬಂದ ಹೆಸರುಗಳು ರೂಢನಾಮ
* ಗುರುತಿಗಾಗಿ ಹಾಗೂ ವ್ಯವಹಾರದ ಉಪಯೋಗಕ್ಕಾಗಿ ಇಟ್ಟುಕೊಂಡ ಹೆಸರುಗಳು ಅಂಕಿತನಾಮ
* ರೂಪ, ಗುಣ, ಸ್ವಭಾವ, ವಿಶೇಷವಾದ ಅರ್ಥಕ್ಕೆ ಅನುಗುಣವಾಗಿ ಇಟ್ಟ ಹೆಸರುಗಳು ಅನ್ವರ್ಥನಾಮ.

### ಭಾಗ – ೨

**ಅ. ಈ ಹೇಳಿಕೆಗಳಿಗೆ ಸರಿ ಹೊಂದುವ ಸೂಕ್ತ ಉತ್ತರವನ್ನು ಗುರುತಿಸಿ.**

೧. ವ್ಯಕ್ತಿ, ವಸ್ತು, ಸ್ಥಳ ಮತ್ತು ಪ್ರಾಣಿಗಳ ಹೆಸರನ್ನು ಸೂಚಿಸುವ ಪದ

ಅ. ಕ್ರಿಯಾವಿಶೇಷಣ ಆ. ಸರ್ವನಾಮ ಇ. ಕ್ರಿಯಾಪದ ಈ. ನಾಮಪದ

೨. ರೂಢನಾಮ ಪದಕ್ಕೆ ಉದಾಹರಣೆ

ಅ. ರೋಗಿ ಆ. ನದಿ ಇ. ಕಾವೇರಿ ಈ. ದಾವಣಗೆರೆ

೩. ಅಂಕಿತನಾಮ ಪದಕ್ಕೆ ಉದಾಹರಣೆ

ಅ. ಪರ್ವತ ಆ. ಶಾಲೆ ಇ. ಶಿಕ್ಷಕ ಈ. ಕಾವೇರಿ

೪. ಅನ್ವರ್ಥನಾಮ ಪದಕ್ಕೆ ಉದಾಹರಣೆ

ಅ. ಪುಸ್ತಕ ಆ. ಅರಸ ಇ. ಮನೆ ಈ. ವ್ಯಾಪಾರಿ

**ಆ. ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.**

ಏಳು × ಆರೋಗ್ಯ ×

ಮೇಲೆ × ವಿದೇಶಿ ×

# ಅತಿ ಆಸೆ

ಅದೊಂದು ದಟ್ಟವಾದ ಕಾಡು. ಅಲ್ಲೊಂದು ತಿಳಿನೀರಿನ ಸರೋವರ. ಆ ಸರೋವರದಲ್ಲಿ ಒಂದು ಆಮೆ ವಾಸವಾಗಿತ್ತು. ಸರೋವರದ ದಡದ ಮೇಲಿದ್ದ ಮರವೊಂದರಲ್ಲಿ ಚೆಂದದ ನವಿಲು ಇರುತ್ತಿತ್ತು. ಆಮೆ ಮತ್ತು ನವಿಲು ಇಬ್ಬರೂ ಆಪ್ತಮಿತ್ರರಾಗಿದ್ದರು. ಈ ಮಿತ್ರರು ಆಗಾಗ್ಗೆ ಸರೋವರದ ದಡದಲ್ಲಿ ಕುಳಿತು ಲೋಕಾಭಿರಾಮವಾಗಿ ಹರಟೆ ಕೊಚ್ಚುತ್ತಿರುತ್ತಿದ್ದರು. ಬುದ್ಧಿವಂತಿಕೆಯ ಗುಡ್ಡವೇ ಆಗಿದ್ದ ಆಮೆ ನೂರಾರು ಕುತೂಹಲಕರ ವಿಷಯಗಳನ್ನು ನವಿಲಿಗೆ ಹೇಳಿ ರಂಜಿಸಿದರೆ, ನವಿಲು ತನ್ನ ಅಂದದ ಗರಿಗಳನ್ನು ಬಿಚ್ಚಿ ಚೆಂದಾಗಿ ನರ್ತಿಸಿ ಆಮೆಯನ್ನು ಖುಷಿಪಡಿಸುತ್ತಿತ್ತು. ಆದರ್ಶ ಗೆಳೆಯರೆಂದೇ ಆ ಕಾಡಿನ ಎಲ್ಲ ಪ್ರಾಣಿಗಳಿಂದ ಮೆಚ್ಚುಗೆ ಗಳಿಸಿದ್ದವು ಈ ಆಮೆ ಮತ್ತು ನವಿಲು.

ಒಮ್ಮೆ ಈ ಆಪ್ತಮಿತ್ರರು ಅದೇ ಸರೋವರದ ದಂಡೆಯಲ್ಲಿ ಕುಳಿತು ಹರಟೆ ಹೊಡೆಯುತ್ತಿದ್ದಾಗ ಅವರ ಗಮನಕ್ಕೆ ಬಾರದಂತೆ ಮೆಲ್ಲನೆ ಹೆಜ್ಜೆ ಹಾಕುತ್ತಾ ಬಂದ ಬೇಟೆಗಾರನೊಬ್ಬ ಬಲೆ ಬೀಸಿ ಆ ನವಿಲನ್ನು ಹಿಡಿದೇಬಿಟ್ಟ! ಅದರ ಕಾಲನ್ನು ಕಟ್ಟಿ ಇನ್ನೇನು ಹೊತ್ತುಕೊಂಡು ಹೋಗಬೇಕು ಆಗ ಆಮೆ ತನ್ನ ಗೆಳೆಯನನ್ನು ಬಿಟ್ಟುಬಿಡುವಂತೆ ಬೇಡನನ್ನು ಅಂಗಲಾಚಿ ಬೇಡಿತು. “ಇಂಥ ಚೆಂದದ ನವಿಲನ್ನು ನಾನೇಕೆ ಬಿಡಲಿ? ಮಾರುಕಟ್ಟೆಗೆ ಒಯ್ದು ಮಾರಿದರೆ ಕೈತುಂಬಾ ಹಣ ಸಿಗುತ್ತೆ ನನಗೆ. ಇದನ್ನು ಬಿಡುವುದುಂಟೇ!” ಎಂದು ಬೇಡ ಪಟ್ಟು ಬಿಗಿ ಮಾಡಿದ. “ಅದಕ್ಕಿಂತಲೂ ಹೆಚ್ಚು ಬೆಲೆ ಸಿಗುವಂತಹ ಒಂದು ಮುತ್ತನ್ನು ನಿನಗೆ ನಾನು ಕೊಡ್ತೇನೆ. ನನ್ನ ಗೆಳೆಯನನ್ನು ಬಿಟ್ಟು ಬಿಡು” ಎಂದು ಕೇಳಿಕೊಂಡ ಆಮೆ, “ಇಲ್ಲೇ ನಿಂತಿರು. ಈಗ ಬರ್ತೀನಿ. ಆ ಮುತ್ತನ್ನು ತೆಗೆದುಕೊಂಡಮೇಲೆ ನನ್ನ ಗೆಳೆಯನನ್ನು ಬಿಡಬೇಕು ಮತ್ತೆ” ಎಂದು ಹೇಳಿ ಸರೋವರದಲ್ಲಿ ಮುಳುಗಿತು.



ಬೇಡನು ನೋಡ ನೋಡುತ್ತಿರುವಂತೆಯೇ ನೀರಿನಾಳದಿಂದ ಎದ್ದು ಬಂದ ಆಮೆ ಅತ್ಯುತ್ತಮ ದರ್ಜೆಯ ಮುತ್ತನ್ನು ತಂದು ಕೊಟ್ಟಿತು. ಅಪರೂಪದ ಆ ಮುತ್ತನ್ನು ನೋಡಿ ಬೇಡನಿಗೆ ಮಾತೇ ಹೊರಡಲಿಲ್ಲ! ನಿಜವೋ? ಸುಳ್ಳೋ? ಎಂದು ಮುಟ್ಟಿ ನೋಡಿಕೊಂಡ. ಆಶ್ಚರ್ಯದಿಂದ ಕಣ್ಣುಗಳು ಅರಳಿದವು. ಕೊಟ್ಟ ಮಾತಿನಂತೆ ಬೇಟೆಗಾರ ನವಿಲನ್ನು ಬಿಡುಗಡೆ ಮಾಡಿದ. ಸಂತೋಷದಿಂದ ಮುತ್ತನ್ನು ಹಿಡಿದುಕೊಂಡು ಮನೆಯಕಡೆ ನಡೆದ. ಗೆಳೆಯರಿಬ್ಬರ ಸಂತೋಷಕ್ಕೆ ಪಾರವೇ ಇರಲಿಲ್ಲ! ಎಂಥಾ ಗೆಳೆತನ! ಕಷ್ಟದಲ್ಲಿದ್ದಾಗ ಪರಸ್ಪರ ಸಹಾಯ ಮಾಡುವುದು, ಸಂತೋಷದಲ್ಲಿ ಪಾಲ್ಗೊಳ್ಳುವುದು ಒಳ್ಳೆಯ ಗೆಳೆತನ, ಅಲ್ಲವೇ?

ಇದಾಗಿ ಎರಡು ದಿನಗಳು ಕಳೆದವು. ಆ ಬೇಟೆಗಾರ ಮತ್ತೆ ಆ ಸರೋವರದ ಬಳಿಗೆ ಬಂದ. ಎಂದಿನಂತೆ ದಂಡೆಗೆ ಬರುತ್ತಿದ್ದ ಆಮೆ ಅಂದೂ ಕೂಡ ದಂಡೆಗೆ ಬಂತು. ಈ ಬೇಡನನ್ನು ನೋಡಿ, 'ಮುಂದೆ ಬರಬಹುದಾದ ಆಪತ್ತನ್ನು ಹೇಗಪ್ಪಾ ನಿವಾರಿಸಿಕೊಳ್ಳುವುದು?' ಎಂದುಕೊಳ್ಳುತ್ತಲೇ 'ಆದದ್ದಾಗಲಿ, ನಿಭಾಯಿಸೋಣ' ಅಂದುಕೊಂಡು ದಡದಲ್ಲಿ ನಿಂತುಕೊಂಡಿತು.

"ನೀನು ನನಗೆ ಕೊಟ್ಟ ಈ ಮುತ್ತು ಅತ್ಯುತ್ತಮ ಗುಣಮಟ್ಟದ್ದೇನೋ ನಿಜ. ಆದರೆ ಇದರ ಮೌಲ್ಯ ಇಮ್ಮಡಿಯಾಗುವುದು ಯಾವಾಗಪ್ಪ ಅಂದ್ರೆ ಇದೇ ರೀತಿ ಇರುವ ಇನ್ನೊಂದು ಮುತ್ತನ್ನು ಜೋಡಿಸಿದ ಒಂದು ಜೊತೆ ಕಿವಿಯೋಲೆ ಮಾಡಿಸಿದಾಗ. ಅದಕ್ಕೇ ಈಗ ನಾನು ನಿನ್ನ ಹತ್ತಿರ ಮತ್ತೆ ಬಂದಿರೋದು. ನೀನು ಇದೇ ರೀತಿ ಇರುವ ಇನ್ನೊಂದು ಮುತ್ತನ್ನು ಈಗಿಂದೀಗಲೇ ತಂದುಕೊಡಬೇಕು. ಇಲ್ಲದೇ ಇದ್ರೇ..." ಎಂದು ಗರ್ವದಿಂದ ಬೆದರಿಸುವ ದನಿಯಲ್ಲಿ ಆಮೆಗೆ ಹೇಳಿದ.

"ಸರಿ, ಸರಿ. ಅದೇ ತರಹದ ಇನ್ನೊಂದು ಮುತ್ತು ತಂದು ಕೊಡ್ತೀನಿ, ಆಯ್ತಾ? ಸರಿಯಾದ ಜೋಡಿ ಹುಡುಕೋದಕ್ಕೆ ನಿನ್ನ ಹತ್ತಿರ ಇರೋ ಆ ಮುತ್ತನ್ನು ಇಲ್ಲಿ ಕೊಡು. ಬೇಗ ಹೋಗಿ ತಂದೇ ಬಿಡ್ತೀನಿ ಮತ್ತೆ," ಎಂದು ಹೇಳಿತು ಜಾಣ ಆಮೆ.

ಆ ಬೇಟೆಗಾರನಿಗೆ ನಂಬುವುದಕ್ಕೇ ಆಗಲಿಲ್ಲ! ಆಮೆ ಇಷ್ಟು ಸುಲಭವಾಗಿ ಒಪ್ಪಿಕೊಂಡಿತಲ್ಲಾ ಅನ್ನುವ ಖುಷಿಯಿಂದ ತನ್ನಲ್ಲಿದ್ದ ಆ ಮುತ್ತನ್ನು ಆಮೆಗೆ ಕೊಟ್ಟ. ಮುತ್ತನ್ನು ತೆಗೆದುಕೊಂಡ ಆಮೆ ನೀರಿಗಿಳಿಯಿತು. "ಎಷ್ಟು ಹೊತ್ತು ಕಾಯಬೇಕಪ್ಪಾ ನಾನು?" ಎಂದು ಆತಂಕದಿಂದ ಬೇಡ ಕೇಳಿದ. "ಬಹುಶಃ ಅನಂತ ಕಾಲದವರೆಗೆ ನೀನು ಕಾಯುತ್ತಲೇ ಇರಬೇಕಾಗಬಹುದು! ಕೇಳಿಲ್ಲಿ, ನೀನು ಇಲ್ಲಿಗೆ ಮತ್ತೆ ಬಂದೇ ಬರುತ್ತೀಯ ಎಂದು ನಾವು ಮೊದಲೇ ಊಹಿಸಿದ್ದೆವು. ಹಾಗಾಗಿ ನನ್ನ ಗೆಳೆಯನನ್ನು ಈ ದಟ್ಟಡವಿಯ ಆಳದಲ್ಲಿ ನಿನಗೆ ಸಿಗದೇ ಇರುವ ಜಾಗದಲ್ಲಿ ವಾಸಮಾಡಲಿಕ್ಕೆ ಕಳಿಸಿಕೊಟ್ಟಿದ್ದೇನೆ. ಈಗ ನಿನ್ನ ಬೆದರಿಕೆಗೆ ನಾನು ಮಣಿಯುವ ಅಗತ್ಯವೇ ಇಲ್ಲ, ಅಲ್ವಾ?" ಎಂದು ಹೇಳಿ ನಗುತ್ತಾ ನೀರಿನಾಳಕ್ಕೆ ಈಜುತ್ತಾ ಸಾಗಿತು. ಅತಿ ಆಸೆಯಿಂದ ಕೈಯಲ್ಲಿದ್ದದ್ದನ್ನೂ ಕಳೆದುಕೊಂಡು ಕಮಂಗಿಯಾದ ಆ ಬೇಟೆಗಾರ ದಿಙ್ಮೂಢನಾಗಿ ದಡದ ಮೇಲೆ ಬಹಳ ಹೊತ್ತಿನವರೆಗೆ ಕುಳಿತೇ ಇದ್ದ!

**– ಬೇದ್ರೆ ಮಂಜುನಾಥ**

(ಇಂಗ್ಲಿಷ್ ಮೂಲ : ಲೂಯಿ ಫರ್ನಾಂಡಿಸ್)

## ಅ. ಬಿಟ್ಟಿರುವ ಸ್ಥಳಗಳನ್ನು ಸೂಕ್ತ ಪದಗಳಿಂದ ಭರ್ತಿ ಮಾಡಿರಿ.

ಅದೊಂದು __________ ಕಾಡು. ಅಲ್ಲೊಂದು __________ ಸರೋವರ. ಆ ಸರೋವರದಲ್ಲಿ ಒಂದು __________ ವಾಸವಾಗಿತ್ತು. ಸರೋವರದ ದಡದ ಮೇಲಿದ್ದ ಮರವೊಂದರಲ್ಲಿ ಚೆಂದದ __________ ಇರುತ್ತಿತ್ತು. ಆಮೆ ಮತ್ತು ನವಿಲು ಇಬ್ಬರೂ ಆಪ್ತಮಿತ್ರರಾಗಿದ್ದರು. ಈ ಮಿತ್ರರು ಆಗಾಗ್ಗೆ __________ ದ ದಡದಲ್ಲಿ ಕುಳಿತು ಲೋಕಾಭಿರಾಮವಾಗಿ ಹರಟೆ ಕೊಚ್ಚುತ್ತಿರುತ್ತಿದ್ದರು. ಬುದ್ಧಿವಂತಿಕೆಯ ಗುಡ್ಡವೇ ಆಗಿದ್ದ ಆಮೆ ನೂರಾರು ಕುತೂಹಲಕರ ವಿಷಯಗಳನ್ನು ನವಿಲಿಗೆ ಹೇಳಿ ರಂಜಿಸಿದರೆ, ನವಿಲು ತನ್ನ ಅಂದದ __________ ಗಳನ್ನು ಬಿಚ್ಚಿ ಚೆಂದಾಗಿ ನರ್ತಿಸಿ ಆಮೆಯನ್ನು ಖುಷಿಪಡಿಸುತ್ತಿತ್ತು. ಆದರ್ಶ ಗೆಳೆಯರೆಂದೇ ಆ ಕಾಡಿನ ಎಲ್ಲ __________ ಗಳಿಂದ ಮೆಚ್ಚುಗೆ ಗಳಿಸಿದ್ದವು ಈ ಆಮೆ ಮತ್ತು ನವಿಲು.

## ಆ. ಈ ಗದ್ಯ ಭಾಗವನ್ನು ಸಂಭಾಷಣಾ ರೂಪದಲ್ಲಿ ಬರೆಯಿರಿ.

ಆಮೆ ತನ್ನ ಗೆಳೆಯನನ್ನು ಬಿಟ್ಟುಬಿಡುವಂತೆ ಬೇಡನನ್ನು ಅಂಗಲಾಚಿ ಬೇಡಿತು. "ಇಂಥ ಚೆಂದದ ನವಿಲನ್ನು ನಾನೇಕೆ ಬಿಡಲಿ? ಮಾರುಕಟ್ಟೆಗೆ ಒಯ್ದು ಮಾರಿದರೆ ಕೈತುಂಬಾ ಹಣ ಸಿಗುತ್ತೆ ನನಗೆ. ಇದನ್ನು ಬಿಡುವುದುಂಟೇ!" ಎಂದು ಬೇಡ ಪಟ್ಟುಬಿಗಿಮಾಡಿದ. "ಅದಕ್ಕಿಂತಲೂ ಹೆಚ್ಚು ಬೆಲೆ ಸಿಗುವಂತಹ ಒಂದು ಮುತ್ತನ್ನು ನಿನಗೆ ನಾನು ಕೊಡ್ತೇನೆ. ನನ್ನ ಗೆಳೆಯನನ್ನು ಬಿಟ್ಟು ಬಿಡು" ಎಂದು ಕೇಳಿಕೊಂಡ ಆಮೆ, "ಇಲ್ಲೇ ನಿಂತಿರು. ಈಗ ಬರ್ತೀನಿ. ಆ ಮುತ್ತನ್ನು ತೆಗೆದುಕೊಂಡ ಮೇಲೆ ನನ್ನ ಗೆಳೆಯನನ್ನು ಬಿಡಬೇಕು ಮತ್ತೆ" ಎಂದು ಹೇಳಿ ಸರೋವರದಲ್ಲಿ ಮುಳುಗಿತು.





# ಶಬ್ದಾರ್ಥಕೋಶ

## ಮೊದಲನೆಯ ಸೆಮಿಸ್ಟರ್

### ಅ

ಅಚ್ಚರಿ – ಆಶ್ಚರ್ಯ

ಅಚ್ಚಳಿಯದ – ಅಳಿಯದ, ಹಾಳಾಗದ.

ಅಂದ – ಸುಂದರ, ಚೆಂದ

### ಆ

ಆಶ್ರಯ – ಆಸರೆ

ಆಗ್ರಹ – ಒತ್ತಾಯ

ಆರೈಕೆ – ಶುಶ್ರೂಷೆ, ಪಾಲನೆ

### ಎ

ಎನಿತು – ಎಷ್ಟು

### ಒ

ಒತ್ತಾಯಿಸು – ಬಲವಂತ ಮಾಡು

### ಕ

ಕದಡು – ಕಲಕು, ಚಂಚಲ;

ಕಲೆತರು – ಸೇರು, ಕೂಡು

ಕೈಜೋಡಿಸು – ಜೊತೆಯಾಗು

ಕುಶಲ – ಕ್ಷೇಮ

ಕೊರತೆ – ಕಡಿಮೆ, ಇಲ್ಲದಿರುವುದು

ಕತ್ತು – ಕೊರಳು, ಕುತ್ತಿಗೆ

ಕೆದರಿದ – ಹರಡಿದ

ಕೆಣಕು – ಸಿಟ್ಟಿಗೇಳುವಂತೆ ಮಾಡು

ಕಾಡು – ಪೀಡಿಸು

### ಗ

ಗದ್ದಲ – ಗಲಾಟೆ

### ಚ

ಚಳುವಳಿ – ಆಂದೋಲನ

### ಜ

ಜಾವ – ಹೊತ್ತು

ಜೋಪಾನ – ಭದ್ರ

ಜೋಡಿಸು – ಹೊಂದಿಸು

### ತ

ತವರು – ತಾಯಿಯ ಮನೆ

ತೊರೆ – ಬಿಡು

ತೊಡು – ಧರಿಸು

ತುಂಟ – ತಂಟೆಕೋರ

ತೋರುವ – ತೋರಿಸುವ

### ದ

ದಣಿವು – ಆಯಾಸ, ಸುಸ್ತು

ದಿನಾಲು – ಪ್ರತಿದಿನ

ದುರಾಸೆ – ಕೆಟ್ಟ ಆಸೆ

### ನ

ನಡೆಯೊಲ್ಲ – ಸಾಧ್ಯವಾಗುವುದಿಲ್ಲ

ನರಳು – ಸಂಕಟಪಡು

ನಿರುಪಾಯ – ಉಪಾಯ ಕಾಣದೆ

ನಗೆ – ಜಿಗಿ, ಹಾರು

ನೆಮ್ಮದಿ – ಸಂತೃಪ್ತಿ

ನೋವು – ಸಂಕಟ, ಬೇನೆ

ನೆಂಟ – ಬಂಧು, ಬೀಗ

## ಪ

ಪುಷ್ಪ – ಹೂವು, ಸುಮ, ಕುಸುಮ

ಪೀಡಿಸು – ಹಿಂಸೆ ಕೊಡು, ಕಾಡು

ಪ್ರಭಾವ – ಪ್ರೇರಣೆ

## ಬ

ಬೇಸರ – ದುಃಖ, ಬೇಜಾರು

ಬಿಡುವು – ರಜೆ, ಸೂಟಿ

ಬೆಳಗು – ಬೆಳಗ್ಗೆ, ಮುಂಜಾನೆ

ಬೈಗು – ಸಂಜೆ, ಸಾಯಂಕಾಲ

ಬೆಸೆ – ಕೂಡಿಸು

ಬಿಗಿ – ಹಿಡಿತ, ಸುತ್ತಿಕೋ

## ಮ

ಮನಗಂಡು – ತಿಳಿದುಕೊಂಡು

ಮೈಮರೆತು – ಎಚ್ಚರವಿಲ್ಲದಂತಿರು

ಮೌನ – ಮಾತಿಲ್ಲದಿರುವಿಕೆ

ಮರೆ – ಹಿಂದಿನಿಂದ, ನೆನಪಾಗದಿರುವುದು

ಮೇಗೆ – ಮೇಲೆ

## ವ

ವ್ಯಾಸಂಗ – ಅಧ್ಯಯನ

## ಸ

ಸಮಯ – ಹೊತ್ತು, ವೇಳೆ, ಕಾಲ

ಸ್ವದೇಶಿ – ದೇಶೀಯ, ಸ್ವಂತ ದೇಶದವ

## ಹ

ಹಂಬಲ – ಆಸೆ, ತೀವ್ರವಾದ

ಹೋಲಿ – ಹೋಳಿ, ರಂಗಿನ ಆಟ.





## ಎರಡನೆಯ ಸೆಮಿಸ್ಟರ್

### ಪದ್ಯಪಾಠ – ೧

# ಕನ್ನಡ

**ಪಾಠಕ್ಕೂ ಮುನ್ನ ..**

ಕರ್ನಾಟಕದವರಿಗೆ ಕನ್ನಡಾಭಿಮಾನ ಕೇವಲ ನವೆಂಬರ್ ತಿಂಗಳಿಗೆ ಮಾತ್ರ ಸೀಮಿತವಲ್ಲ. ನಾಡು-ನುಡಿಯ ಬಗ್ಗೆ ಅಭಿಮಾನ ಪ್ರತಿಯೊಬ್ಬರಲ್ಲೂ ಸದಾ ಮಿಡಿಯುತ್ತಿರಬೇಕು. ಅದು ಕಾಮಧೇನು. ಕನ್ನಡಭಾಷೆ ನಮ್ಮಯ ಉಸಿರಾಗಿದೆ ಎಂಬ ಅಂಶ ಇಲ್ಲಿ ಪ್ರಕಟಗೊಂಡಿದೆ.

ಕನ್ನಡವೆಂದರೆ ಬರಿ ನುಡಿಯಲ್ಲ;<br>
ಹಿರಿದಿದೆ ಅದರರ್ಥ;<br>
ಜಲವೆಂದರೆ ನೀರಲ್ಲ,<br>
ಅದು ಪಾವನ ತೀರ್ಥ

ಕನ್ನಡವೆಂದರೆ ಬರಿ ನಾಡಲ್ಲ<br>
ಭೂಪಟ, ಗೆರೆ, ಚುಕ್ಕೆ<br>
ಮರವೆಂದರೆ ಬರಿ ಕಟ್ಟಿಗೆಯೇ?<br>
ಶ್ರೀಗಂಧದ ಚಕ್ಕೆ





ಕನ್ನಡ ಬರಿ ಕರ್ನಾಟಕವಲ್ಲ<br>
ಅಸೀಮ ಅದು ಅದಿಗಂತ<br>
ದೇವರು ಕೇವಲ ವಿಗ್ರಹವಲ್ಲ<br>
ಅಂತರ್ಭಾವ ಅನಂತ

ಕನ್ನಡವೆಂದರೆ ಜನಜಂಗುಳಿಯಲ್ಲ<br>
ಜೀವನ ಶೈಲಿ ವಿಧಾನ<br>
ವಾಯುವೆಂದರೆ ಬರಿ ಹವೆಯೇ ಅಲ್ಲ<br>
ಉಸಿರದು ಪಂಚಪ್ರಾಣ

ಕನ್ನಡವಲ್ಲ ತಿಂಗಳು ನಡೆಸುವ<br>
ಗುಲ್ಲಿನ ಕಾಮನಬಿಲ್ಲು<br>
ರವಿ ಶಶಿತಾರೆಯ ನಿತ್ಯೋತ್ಸವವದು<br>
ಸರಸತಿ ವೀಣೆಯ ಸೊಲ್ಲು

– ಕೆ.ಎಸ್. ನಿಸಾರ್ ಅಹಮದ್

## ಕವಿ ಕೃತಿ ಪರಿಚಯ



ಕೊಕ್ಕರೆ ಹೊಸಳ್ಳಿ ಶೇಖಹೈದರ ನಿಸಾರ್ ಅಹಮದ್ ಅವರು ಬೆಂಗಳೂರು ಜಿಲ್ಲೆಯ ದೇವನಹಳ್ಳಿಯಲ್ಲಿಯವರು. ಇವರು ೧೯೩೬ರಲ್ಲಿ ಜನಿಸಿದರು. 'ಮನಸು ಗಾಂಧಿಬಜಾರು' ಹಾಗೂ ನಿತ್ಯೋತ್ಸವ' ಎಂಬ ಪ್ರಸಿದ್ಧ ಕವನಸಂಕಲನಗಳನ್ನು ಹೊರತಂದಿದ್ದಾರೆ. ಇವರು ಪಂಪ ಪ್ರಶಸ್ತಿಗೆ ಭಾಜನರಾಗಿದ್ದಾರೆ. ಶಿವಮೊಗ್ಗದಲ್ಲಿ ನಡೆದ ೭೩ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

**ಕ್ಷೇತ್ರ :** ಆಲಿಸುವುದು

**ಸಾಮರ್ಥ್ಯ :** ಸಮರ್ಪಕವಾಗಿ ಕಂಠಪಾಠ ಒಪ್ಪಿಸುವುದು

### ಓದಿ ತಿಳಿಯಿರಿ

ಹಿರಿದು – ದೊಡ್ಡದು; ಪಾವನ – ಪವಿತ್ರ ; ತೀರ್ಥ – ಪವಿತ್ರವಾದ ನೀರು; ಅಂತರ್ಭಾವ – ಒಳ ಮನಸ್ಸಿನ ಭಾವ; ಅನಂತ – ಅಂತ್ಯವಿಲ್ಲದ್ದು; ಜನಜಂಗುಳಿ – ಹೆಚ್ಚು ಜನರಿರುವ ತಾಣ; ಪಂಚಪ್ರಾಣ – ಬಹಳ ಇಷ್ಟವಾದದ್ದು; ಗುಲ್ಲು – ಗಲಾಟೆ, ಗದ್ದಲ ; ಸೊಲ್ಲು – ಮಾತು, ನುಡಿ



### ಗಮನಿಸಿ ತಿಳಿಯಿರಿ

ನಿತ್ಯೋತ್ಸವ – ನಿತ್ಯವೂ ಮಾಡುವ ಉತ್ಸವ / ಹಬ್ಬ

ಅಸೀಮ – ಸೀಮೆ ಇಲ್ಲದ, ಅಪಾರ

ಅದಿಗಂತ – ದಿಕ್ಕುಗಳಿಲ್ಲದ್ದು, ಎಲ್ಲೆಡೆಯೂ ಇರುವಂತದ್ದು

ಅಂತರ್ಭಾವ – ಕಣ್ಣಿಗೆ ಕಾಣುವಂತದ್ದಲ್ಲ, ಸ್ಪರ್ಶಕ್ಕೆ ಸಿಕ್ಕುವಂತದ್ದಲ್ಲ ಒಳ ಮನಸ್ಸಿನ ಭಾವನೆಗಳ ಆಧಾರದಿಂದ ದೇವರನ್ನು ಕಲ್ಪಿಸುವುದು

### ಅಭ್ಯಾಸ

**ಅ) ಬಿಟ್ಟಿರುವ ಖಾಲಿ ಜಾಗಗಳನ್ನು ಕೊಟ್ಟಿರುವ ಉತ್ತರಗಳಿಂದ ಆರಿಸಿ ಬರೆಯಿರಿ.**

೧. ಕನ್ನಡವೆಂದರೆ ಬರಿ ______________ ಹಿರಿದಿದೆ ಅದರರ್ಥ

ಅ) ಹಾಡಲ್ಲ ಆ) ನುಡಿಯಲ್ಲ ಇ) ಶಿಲೆಯಲ್ಲ ಈ) ಕಾಡಲ್ಲ

೨. ಮರವೆಂದರೆ ಬರಿ ಕಟ್ಟಿಗೆಯೇ ? ____________ ದ ಚಕ್ಕೆ
ಅ) ಶ್ರೀಗಂಧ ಆ) ಅಡಿಕೆ ಮರ ಇ) ತೆಂಗಿನ ಮರ ಈ) ತೇಗ

೩. ದೇವರು ಕೇವಲ ____________ ಅಂತರ್ಭಾವ ಅನಂತ
ಅ) ನೀರಲ್ಲ ಆ) ಆಕಾಶವಲ್ಲ ಇ) ಮಣ್ಣಲ್ಲ ಈ) ವಿಗ್ರಹವಲ್ಲ

೪. ಕನ್ನಡವಲ್ಲ ____________ ನಡೆಸುವ ಗುಲ್ಲಿನ ಕಾಮನಬಿಲ್ಲು
ಅ) ವಾರ ಆ) ದಿನ ಇ) ತಿಂಗಳು ಈ) ವರ್ಷ

**ಆ) ಈ ಪದ್ಯದ ಸಾಲುಗಳನ್ನು ಸರಿಯಾಗಿ ಹೊಂದಿಸಿರಿ.**

| ಅ | ಆ |
| --- | --- |
| ೧. ಕನ್ನಡವೆಂದರೆ ಜನಜಂಗುಳಿಯಲ್ಲ | ಅ. ಜೀವನ ಶೈಲಿ ವಿಧಾನ |
| ೨. ಕನ್ನಡವಲ್ಲ ತಿಂಗಳು ನಡೆಸುವ | ಆ. ಗುಲ್ಲಿನ ಕಾಮನಬಿಲ್ಲು |
| ೩. ಕನ್ನಡ ಬರಿ ಕರ್ನಾಟಕವಲ್ಲ | ಇ. ಅಸೀಮ ಅದು ಅದಿಗಂತ |
| ೪. ಕನ್ನಡವೆಂದರೆ ಬರಿ ನುಡಿಯಲ್ಲ | ಈ. ಹಿರಿದಿದೆ ಅದರರ್ಥ |
| | ಉ. ಶ್ರೀಗಂಧದ ಚಕ್ಕೆ |



**ಇ) ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಯಾವುದರ ಅರ್ಥ ಹಿರಿದಾಗಿದೆ ಎಂದು ಪದ್ಯದಲ್ಲಿ ಹೇಳಲಾಗಿದೆ?
೨. ಕನ್ನಡ ನಾಡಿನ ಮರವನ್ನು ಯಾವುದಕ್ಕೆ ಹೋಲಿಸಲಾಗಿದೆ?
೩. ಈ ಪದ್ಯದ ಯಾವ ಸಾಲು ನಿನಗೆ ಇಷ್ಟವಾಯಿತು?
೪. ಈ ಪದ್ಯವನ್ನು ಬರೆದ ಕವಿಯ ಹೆಸರೇನು?

**ಈ) ಈ ಪದ್ಯದಲ್ಲಿರುವ ಪ್ರಾಸ ಪದಗಳನ್ನು ಗುರುತಿಸಿ ಬರೆಯಿರಿ.**

**ಉ) ಶಿಕ್ಷಕರ ನೆರವಿನಿಂದ ಈ ಪದ್ಯದ ಭಾವಾರ್ಥವನ್ನು ಬರೆಯಿರಿ.**

**ಊ) ಕನ್ನಡ ನಾಡು–ನುಡಿಯ ಬಗ್ಗೆ ಇರುವ ಹಾಡುಗಳನ್ನು ಸಂಗ್ರಹಿಸಿ, ರಾಗವಾಗಿ ಹಾಡಲು ಪ್ರಯತ್ನಿಸಿ.**

## ಸಾಮರ್ಥ್ಯ ಆಧಾರಿತ ಅಭ್ಯಾಸ

**ಅ) ನೀವು ಕಲಿತಿರುವ ಇತರೆ ಕನ್ನಡ ಪದ್ಯಗಳನ್ನು ತರಗತಿಯಲ್ಲಿ ಸಾಮೂಹಿಕವಾಗಿ ಹಾಡಿರಿ.**

ಆ) ಈ ಗಾದೆ ಮಾತುಗಳಿಗೆ ಅರ್ಥ ಬರೆಯಿರಿ.

೧. ಕಬ್ಬು ಡೊಂಕಾದರೆ ಸಿಹಿ ಡೊಂಕೇ?

೨. ಮನಸ್ಸಿದ್ದರೆ ಮಾರ್ಗ

೩. ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆ ಮೇಲು

೪. ಆತುರಗಾರನಿಗೆ ಬುದ್ಧಿ ಮಟ್ಟ

## ಅಭ್ಯಾಸ ಚಟುವಟಿಕೆ

ಅ) ನೀವು ನೆನಪಿಟ್ಟುಕೊಂಡಿರುವ ಗಾದೆಗಳನ್ನು ಹೇಳಿರಿ.

ಆ) ನಿಸಾರ್ ಅಹಮದ್ ಅವರ ಇತರ ಪದ್ಯಗಳನ್ನು ಸಂಗ್ರಹಿಸಿ ಓದಿರಿ.

## ವ್ಯಾಕರಣಾಂಶ

### ಭಾಗ – ೧

ಈ ಹೇಳಿಕೆಗಳಿಗೆ ಸರಿ ಹೊಂದುವ ಸೂಕ್ತ ಉತ್ತರವನ್ನು ಗುರುತಿಸಿ.

೧. ಇವುಗಳಲ್ಲಿ ಪುಲ್ಲಿಂಗ ____________
ಅ. ಅಕ್ಕ ಆ. ಅಪ್ಪ ಇ. ಮಹಿಳೆ ಈ. ಅಜ್ಜಿ

೨. ಇವುಗಳಲ್ಲಿ ಸ್ತ್ರೀಲಿಂಗ ____________
ಅ. ಅಜ್ಜ ಆ. ಚಿಕ್ಕಮ್ಮ ಇ. ದೊಡ್ಡಪ್ಪ ಈ. ಮಾವ

೩. ಇವುಗಳಲ್ಲಿ ನಪುಂಸಕ ಲಿಂಗ ____________
ಅ. ಅತ್ತೆ ಆ. ತಂಗಿ ಇ. ಚಿಕ್ಕಪ್ಪ ಈ. ಮನೆ



### ಭಾಗ – ೨

ಅ) **ವಚನ** : ವಚನಗಳಲ್ಲಿ ಎರಡು ವಿಧ. ೧. ಏಕವಚನ ೨. ಬಹುವಚನ
ಒಂದು ವಸ್ತುವನ್ನು ಸೂಚಿಸುವ ಪದಗಳು **ಏಕವಚನ.**
**ಉದಾ :** ಪುಸ್ತಕ, ಎಲೆ ಇತ್ಯಾದಿ.
ಒಂದಕ್ಕಿಂತ ಹೆಚ್ಚಿನ ವಸ್ತುಗಳನ್ನು ತಿಳಿಸುವ ಪದಗಳು **ಬಹುವಚನ.**
**ಉದಾ :** ಪುಸ್ತಕಗಳು, ಎಲೆಗಳು ಇತ್ಯಾದಿ.

ಆ) ಇವುಗಳನ್ನು ಏಕವಚನ ಹಾಗೂ ಬಹುವಚನಗಳಾಗಿ ವರ್ಗೀಕರಿಸಿ ಬರೆಯಿರಿ.

ನಾಯಿ, ಅಣ್ಣಂದಿರು, ಹಸುಗಳು, ಆನೆ, ಕಿಟಕಿ, ಕೈಗಳು

| ಏಕವಚನ | ಬಹುವಚನ |
|---|---|
| ____________ | ____________ |
| ____________ | ____________ |

# ಹಣ್ಣು ಮಾರುವವನ ಹಾಡು

ನಂಜನಗೂಡಿನ ರಸಬಾಳೆ
ತಂದಿಹೆ ಕೊಡಗಿನ ಕಿತ್ತಳೆ
ಬೀದರ ಜಿಲ್ಲೆಯ ಸೀಬೆಯ ಹಣ್ಣು
ಬೆಂಗಳೂರಿನ ಸೇಬಿನ ಹಣ್ಣು

ಕೊಳ್ಳಿರಿ ಹಿಗ್ಗನು ಹರಿಸುವವು
ಕಲ್ಲುಸಕ್ಕರೆಯ ಮರೆಸುವವು

ಕೊಳ್ಳಿರಿ ಮಧುಗಿರಿ ದಾಳಿಂಬೆ
ಬೆಳವಲ ಬಯಲಿನ ಸಿಹಿಲಿಂಬೆ
ಬೆಳಗಾವಿಯ ಸವಿ ಸಪೋಟ
ದೇವನಹಳ್ಳಿಯ ಚಕ್ಕೋತ
ನಾಲಿಗೆ ಬರವನು ಕಳೆಯುವವು

ದೇಹದ ಬಲವನು ಬೆಳೆಸುವವು
ಗಂಜಾಮ್ ಅಂಜೀರ್
ತುಮಕೂರ್ ಹಲಸು
ಧಾರವಾಡದ ಆಪೂಸು
ಮಲೆನಾಡಿನ ಅನಾನಸು

ಸವಿಯಿರಿ ಬಗೆಬಗೆ ಹಣ್ಣುಗಳ
ಕನ್ನಡ ನಾಡಿನ ಹಣ್ಣುಗಳ

– ಕಯ್ಯಾರ ಕಿಞ್ಞಣ್ಣ ರೈ



* *ಈ ಪದ್ಯವನ್ನು ನೆನಪಿನಲ್ಲಿಟ್ಟುಕೊಂಡು ನಿಮ್ಮ ಗೆಳೆಯರ ಮುಂದೆ ಹಾಡಿರಿ.*
* *ಈ ಪದ್ಯದಲ್ಲಿರುವ ಹಣ್ಣುಗಳ ಚಿತ್ರಗಳನ್ನು ಸಂಗ್ರಹಿಸಿರಿ.*

# ಆರ್ಕಿಮಿಡೀಸ್

**ಪಾಠಕ್ಕೂ ಮುನ್ನ ..**

ಮಕ್ಕಳೇ ನೀವು ವಿಜ್ಞಾನದ ಆವಿಷ್ಕಾರಗಳ ಹಿಂದಿನ ಕಥೆಯನ್ನು ಕೇಳಿದ್ದೀರಾ? ಏನೋ ಮಾಡಲು ಹೋಗಿ ಮತ್ತಿನ್ನೇನನ್ನೋ ಕಂಡು ಹಿಡಿದ ಕಥೆ ತಿಳಿದಿದ್ದೀರಾ? ಗಣಿತಜ್ಞ ವಿಜ್ಞಾನಿಯೊಬ್ಬರ ಕುಶಲಮತಿ, ಸಕಾಲಿಕ ಆಲೋಚನೆ, ಮುಂದಾಲೋಚನೆ ದೇಶವನ್ನು ರಕ್ಷಿಸಿದ ಬಗೆ ಹಾಗೂ ವಿಜ್ಞಾನದ ಆವಿಷ್ಕಾರಗಳ ರೋಚಕ ಘಟನೆಗಳನ್ನು ಈ ಗದ್ಯಭಾಗದಲ್ಲಿ ಕಾಣಬಹುದಾಗಿದೆ.

ಆರ್ಕಿಮಿಡೀಸ್ ಕ್ರಿ.ಪೂ. ೨೮೭ರಲ್ಲಿ ಸಿಸಿಲಿ ದ್ವೀಪದ ಸಿರಾಕ್ಯೂಸ್‌ನಲ್ಲಿ ಜನಿಸಿದನು. ಅಲ್ಲಿಯ ದೊರೆಯಾದ ಎರಡನೆಯ ಹೈರೋಗೆ ಇವನು ಸಂಬಂಧಿಯಾಗಿದ್ದನು. ಈ ದೊರೆಯೇ ಆರ್ಕಿಮಿಡಿಸನಿಗೆ ಆಶ್ರಯ ನೀಡಿದ್ದನು. ಈತನ ಪ್ರಾಥಮಿಕ ವಿದ್ಯಾಭ್ಯಾಸವು ಸಿಸಿಲಿಯಲ್ಲಿಯೇ ನಡೆಯಿತು. ನಂತರ ಈಜಿಪ್ಟ್ ದೇಶದ ಅಲೆಕ್ಸಾಂಡ್ರಿಯಾ ವಿಶ್ವವಿದ್ಯಾನಿಲಯದಲ್ಲಿ ಅಭ್ಯಾಸ ಮಾಡಿ ಸಿಸಿಲಿಗೆ ವಾಪಸ್ಸಾದನು. ಆರ್ಕಿಮಿಡೀಸನ ತಂದೆ ಫಿಡಿಯಾಸ್. ಇವನು ಆ ಕಾಲದ ಶ್ರೇಷ್ಠ ಖಗೋಳಶಾಸ್ತ್ರಜ್ಞನಾಗಿದ್ದನು. ಬಹುಶಃ ಆರ್ಕಿಮಿಡೀಸನ ವೈಜ್ಞಾನಿಕ ಮನೋಭಾವಕ್ಕೆ ಆತನ ತಂದೆಯೇ ಪ್ರೇರಣೆಯಾಗಿರಬಹುದು. ಬಾಲ್ಯದಲ್ಲಿ ಇವನು ಪ್ರತಿಯೊಂದು ವಸ್ತುವನ್ನು ಗಮನಿಸುತ್ತಾ ಇದು ಏಕೆ ಹೀಗೆ ವರ್ತಿಸುತ್ತದೆ? ಈ ವಸ್ತು ಪ್ರತಿಯೊಂದು ನಿಮಿಷದಲ್ಲಿಯೂ ಹೀಗೇ ವರ್ತಿಸುತ್ತದೆಯೇ? ಎಂದು ಸದಾ ಕಾಲ ಯೋಚಿಸುತ್ತಿದ್ದನು. ಇವನ ಈ ಯೋಚನಾ ವಿಧಾನವೇ ಮುಂದಿನ ಸಂಶೋಧನೆಗಳಿಗೆ ಕಾರಣವಾಯಿತು.



ಒಮ್ಮೆ ಸಿರಾಕ್ಯೂಸ್‌ನ ರಾಜ ಎರಡನೆಯ ಹೈರೋ ಒಬ್ಬ ಅಕ್ಕಸಾಲಿಗನಿಗೆ ಒಂದು ಚಿನ್ನದ ಕಿರೀಟ ಮಾಡಲು ತಿಳಿಸಿದನು. ಕೆಲವು ದಿನಗಳ ನಂತರ ಅಕ್ಕಸಾಲಿಗನು ಕುಶಲತೆಯಿಂದ ತಯಾರಿಸಿದ ಕಿರೀಟವನ್ನು ರಾಜನಿಗೆ ಒಪ್ಪಿಸಿದನು. ಆದರೆ ರಾಜನಿಗೆ ಒಂದು ಅನುಮಾನ ಕಾಡಿತು. ಅದೇನೆಂದರೆ ಈ ಕಿರೀಟವು ಶುದ್ಧ ಚಿನ್ನದಲ್ಲಿಯೇ ತಯಾರಿಸಿದೆಯೋ, ಇದಕ್ಕೆ ಬೆಳ್ಳಿ, ತಾಮ್ರವನ್ನು ಬೆರೆಸಿದೆಯೋ? ಎಂದು. ಆದರೆ ಇದನ್ನು ತಿಳಿಯಲು ಕಿರೀಟವನ್ನು ಪೂರ್ಣವಾಗಿ ಕರಗಿಸಬೇಕಾಗುತ್ತಿತ್ತು. ರಾಜನಿಗೆ ಸುಂದರವಾದ ಕಿರೀಟ ಕರಗಿಸುವುದು ಇಷ್ಟವಿರಲಿಲ್ಲ. ಅವನು ಆರ್ಕಿಮಿಡೀಸನನ್ನು ಕರೆದು ಕಿರೀಟವನ್ನು ಕರಗಿಸದೇ ಶುದ್ಧ ಚಿನ್ನದಲ್ಲಿ ತಯಾರಿಸಿದೆಯಾ? ಎಂದು ಪರೀಕ್ಷಿಸಲು ಹೇಳಿದನು. ಇದೇ ವಿಷಯವನ್ನು ತಲೆಯಲ್ಲಿ ಹೊತ್ತು ಆರ್ಕಿಮಿಡೀಸನು ಹಗಲು ರಾತ್ರಿ ಯೋಚಿಸಲಾರಂಭಿಸಿದನು. ಒಂದು ದಿನ ಆತ ಸ್ನಾನ ಮಾಡಲು ನೀರು ತುಂಬಿದ ಸ್ನಾನದ ತೊಟ್ಟಿಯಲ್ಲಿ ಇಳಿದನು. ಕೂಡಲೇ ಸ್ವಲ್ಪ ನೀರು ತೊಟ್ಟಿಯಿಂದ ಹೊರಚೆಲ್ಲಿತು. ಅದನ್ನು ನೋಡಿದ ಆರ್ಕಿಮಿಡೀಸನ ತಲೆಯಲ್ಲಿ ಚಿನ್ನದ ಕಿರೀಟದ ಉತ್ತರ ಹೊಳೆಯಿತು. ತಕ್ಷಣ ಆತನು ಸ್ನಾನದ ತೊಟ್ಟಿಯಿಂದ ಹಾಗೇ ರಸ್ತೆಯಲ್ಲಿ "ಯುರೇಕಾ ಯುರೇಕಾ" ಎಂದು ಕೂಗಿಕೊಳ್ಳುತ್ತಾ ರಾಜನ ಬಳಿಗೆ ಓಡೋಡಿ ಬಂದನು. ಗ್ರೀಕ್ ಭಾಷೆಯಲ್ಲಿ ಯುರೇಕಾ ಎಂದರೆ "ನಾನು ಕಂಡು ಹಿಡಿದೆ" ಎಂದು.

"ಆರ್ಕಿಮಿಡೀಸನ ಪ್ರಕಾರ ಒಂದು ವಸ್ತುವನ್ನು ನೀರಿನಲ್ಲಿ ಮುಳುಗಿಸಿದಾಗ ಅದು ಅಷ್ಟೇ ಪ್ರಮಾಣದ ನೀರನ್ನು ಹೊರಚೆಲ್ಲುತ್ತದೆ." ಇದನ್ನು ಜಗತ್ಪ್ರಸಿದ್ಧವಾದ "ಆರ್ಕಿಮಿಡೀಸ್ ತತ್ವ" ಎಂದು ಕರೆಯುತ್ತಾರೆ. ಈ ತತ್ವದಿಂದ ಆತ ಕಿರೀಟದ ಸಮಸ್ಯೆಯನ್ನು ಬಗೆಹರಿಸಿದನು.

ಇವನು ಒಬ್ಬ ಶ್ರೇಷ್ಠ ಗಣಿತಜ್ಞ ಹಾಗೂ ವಿಜ್ಞಾನಿ. ನೀರಿಗೂ ಮೇಲ್ಮುಖ ಬಲವಿದೆ ಎಂದು ತೋರಿಸಿಕೊಟ್ಟವನು. ದೇಶ ದೇಶಗಳನ್ನು ಸಂಪರ್ಕಿಸುವ ಸಾಧನಗಳಲ್ಲಿ ಒಂದಾದ ಹಡಗುಗಳ ಚಲನೆಯ ತತ್ವವು ಆರ್ಕಿಮಿಡೀಸ್‌ನನ್ನು ವಿಶ್ವದ ಶ್ರೇಷ್ಠ ವಿಜ್ಞಾನಿಯನ್ನಾಗಿಸಿತು.

ಒಮ್ಮೆ ಸಿರಾಕ್ಯುಸ್ ದ್ವೀಪದ ಮೇಲೆ ಶತ್ರುಗಳು ಧಾಳಿ ನಡೆಸಿದ್ದರು. ಅದು ದ್ವೀಪವಾದ ಕಾರಣ ಸಮುದ್ರದ ಮೂಲಕ ಧಾಳಿ ನಡೆಸಲು ಸಜ್ಜಾಗಿ, ದ್ವೀಪದ ಸುತ್ತಲೂ ದೊಡ್ಡ ದೊಡ್ಡ ಹಡಗುಗಳಲ್ಲಿ ಶತ್ರುಗಳು ಬಂದರು. ಆ ಸಣ್ಣ ದ್ವೀಪದ ರಾಜನಿಗೆ ಏನು ಮಾಡಬೇಕೆಂದು ತೋಚಲಿಲ್ಲ. ಆತ ಎದೆಗುಂದದೆ ತನಗೆ ಆಪ್ತನಾಗಿದ್ದ ವಿಜ್ಞಾನಿ ಆರ್ಕಿಮಿಡೀಸನನ್ನ ಕರೆಸಿದನು. ಇಬ್ಬರೂ ಸೇರಿ ಏನು ಮಾಡಬೇಕೆಂಬುದನ್ನು ಚರ್ಚಿಸಿದರು. ಕೂಡಲೇ ಆರ್ಕಿಮಿಡೀಸ್ ಒಂದು ಉಪಾಯ ಮಾಡಿದನು.





ದೊಡ್ಡ ದೊಡ್ಡ ಕನ್ನಡಿಗಳನ್ನು ಸಮುದ್ರಕ್ಕಿಂತ ಎತ್ತರವಾದ ಭಾಗಗಳಲ್ಲಿ ನಿರ್ದಿಷ್ಟ ಕೋನಗಳಲ್ಲಿ ನಿಲ್ಲಿಸಲು ಸೇವಕರಿಗೆ ಸೂಚಿಸಿದನು. ಅರ್ಧವೃತ್ತಾಕಾರವಾಗಿ ನಿಲ್ಲಿಸಿದ ಆ ಕನ್ನಡಿಗಳು ಸೂರ್ಯನ ಬೆಳಕನ್ನು ಶತ್ರುಗಳ ಹಡಗುಗಳ ಮೇಲೆ ಒಟ್ಟಾಗಿ ಬೀಳುವಂತೆ ಜೋಡಿಸಲಾಗಿತ್ತು. ಶತ್ರುಗಳ ಸೈನ್ಯ ದ್ವೀಪದ ಹತ್ತಿರಕ್ಕೆ ಬರತೊಡಗಿದಂತೆ ಕನ್ನಡಿಗಳು ಸೂರ್ಯನ ಕಿರಣಗಳನ್ನು ಆ ಹಡಗುಗಳ ಬಟ್ಟೆಗಳ ಮೇಲೆ ಕೇಂದ್ರೀಕರಿಸಿ, ಹಡಗುಗಳು ಹತ್ತಿ ಉರಿಯತೊಡಗಿದವು. ಆರ್ಕಿಮಿಡೀಸನ ವೈಜ್ಞಾನಿಕ ಚಿಂತನೆ ಸಮರ್ಪಕವಾಗಿ ಕೆಲಸ ಮಾಡಿತ್ತು. ಶತ್ರುಗಳ ಸೈನ್ಯ ಸಂಪೂರ್ಣವಾಗಿ ಸೋತು ಹಿಮ್ಮೆಟ್ಟಿತ್ತು.

ಮರಣಹೊಂದಿದಾಗ ಆತನಿಗೆ ಎಪ್ಪತ್ತೈದು ವರ್ಷ ವಯಸ್ಸಾಗಿತ್ತು. ಎರಡನೆಯ ಪ್ಯೂನಿಕ್ ಯುದ್ಧದಲ್ಲಿ ರೋಮನ್ನರು ಸಿರಾಕ್ಯುಸ್ ಅನ್ನು ಆಕ್ರಮಿಸಿದರು. ಸಂಶೋಧನೆಯಲ್ಲಿ ಆರ್ಕಿಮಿಡೀಸ್ ತೊಡಗಿದ್ದ ಕಾರಣ ರೋಮನ್ ಸೈನಿಕರ ಮಾತನ್ನು ಆತ ಕೇಳಲಿಲ್ಲ. ಆಗ ಸೈನಿಕರು ಕತ್ತಿಯಿಂದ ಇರಿದು ಆರ್ಕಿಮಿಡೀಸನನ್ನು ಕೊಂದರು. ತನ್ನ ಜೀವಿತದ ಅವಧಿಯಲ್ಲಿ ಆರ್ಕಿಮಿಡೀಸ್ ದೇಶವನ್ನು ರಕ್ಷಿಸಲು ರಾಜನಿಗೆ ಅನೇಕ ಬಾರಿ ಸಹಾಯ ಮಾಡಿದ್ದನು. ಅದಕ್ಕಾಗಿ ಹಲವಾರು ಯುದ್ಧ ಯಂತ್ರಗಳನ್ನು ಕಂಡು ಹಿಡಿದಿದ್ದನು. ಮಹತ್ವದ ಸಂಶೋಧನೆಯನ್ನು ನೆನಪಿಸುವಂತೆ ಮತ್ತು ಆತನ ಇಚ್ಛೆಯಂತೆ ಆರ್ಕಿಮಿಡೀಸನ ಸಮಾಧಿಯ ಮೇಲೆ ಒಂದು ಸಿಲಿಂಡರ್ ಹಾಗೂ ಗೋಳವನ್ನು ಇರಿಸಲಾಗಿದೆ.

**ಕ್ಷೇತ್ರ :** ಮಾತನಾಡುವುದು

**ಸಾಮರ್ಥ್ಯ :** ಪಠ್ಯದಲ್ಲಿರುವ ಮುಖ್ಯ ವಿಷಯ ಹಾಗೂ ಘಟನಾವಳಿಗಳಲ್ಲಿರುವ ಮುಖ್ಯ ಕಾರ್ಯಕಾರಣ ಸಂಬಂಧ ಗುರುತಿಸುವುದು.

## ಓದಿ ತಿಳಿ

ಶ್ರೇಷ್ಠ – ಪ್ರಸಿದ್ಧ, ಹೆಸರಾಂತ; ಗಣಿತಜ್ಞ – ಗಣಿತ ವಿಷಯದಲ್ಲಿ ಪಾಂಡಿತ್ಯ ಪಡೆದಿರುವವ; ಸತತ – ನಿರಂತರ; ಸಂಶೋಧನೆ – ಹೊಸದರ ಹುಡುಕುವಿಕೆ; ಚಿಂತನೆ – ಆಲೋಚನೆ; ದ್ವೀಪ – ನಡುಗಡ್ಡೆ, ಸುತ್ತಲೂ ನೀರಿನಿಂದ ಆವೃತವಾದ ಭೂಪ್ರದೇಶ; ಎದೆಗುಂದು – ಅಧೀರನಾಗು, ಹೆದರು; ಆಪ್ತ – ಆತ್ಮೀಯ, ಹತ್ತಿರದ ; ಮೊರೆ– ವಿನಂತಿ, ಬೇಡಿಕೆ; ಕ್ಷಿಪ್ರ – ವೇಗ; ಆಶ್ರಯ – ಆಸರೆ, ಆಧಾರ; ಕಾರ್ಯೋನ್ಮುಖ – ಕೆಲಸದಲ್ಲಿ ನಿರತ; ನಿರ್ದಿಷ್ಟ – ನಿಖರ, ಕೇಂದ್ರೀಕರಿಸು – ಒಂದೇ ಸ್ಥಳದಲ್ಲಿ ನಿಲ್ಲಿಸು; ಹಿಮ್ಮೆಟ್ಟು – ಹಿಂಜರಿ, ಬೆನ್ನು ತೋರಿಸು; ಉರಿ – ಸುಡು; ಬಹುಶಃ – ಬಹುತೇಕ; ಕುಶಲತೆ – ನೈಪುಣ್ಯ ; ಸಮಾಧಿ – ಗೋರಿ. ತೋಚು – ಹೊಳೆ.



## ಗಮನಿಸಿ ತಿಳಿ

ಕೋನ – ಎರಡು ಸಮತಲಗಳು ಕೂಡುವ ಜಾಗ, ಸಂದಿ

ಖಗೋಳಶಾಸ್ತ್ರಜ್ಞ – ಆಕಾಶ ಕಾಯಗಳ ಮಾಹಿತಿ ತಜ್ಞ

## ಅಭ್ಯಾಸ

**ಅ. ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

೧. ಸಿರಾಕ್ಯುಸ್‌ನ ರಾಜನ ಹೆಸರೇನು?

________________________________________

೨. "ಯುರೇಕಾ" – ಇದು ಯಾವ ಭಾಷೆಯ ಪದ?

______________________________

೩. ಶತ್ರುಗಳು ಆಕ್ರಮಣ ಮಾಡಿದಾಗ ರಾಜ ಯಾರ ಮೊರೆ ಹೋದ?

______________________________

೪. ಕನ್ನಡಿಗಳು ಸೂರ್ಯನ ಕಿರಣಗಳನ್ನು ಎಲ್ಲಿ ಕೇಂದ್ರೀಕರಿಸಿದವು?

______________________________

## ಆ. ಈ ಪ್ರಶ್ನೆಗಳಿಗೆ ೨–೩ ವಾಕ್ಯಗಳಲ್ಲಿ ಉತ್ತರಿಸಿ.

೧. ಆರ್ಕಿಮಿಡೀಸನ ಸಂಶೋಧನೆಗಳಿಗೆ ಅವನ ತಂದೆ ಹೇಗೆ ಪ್ರೇರಣೆ ನೀಡಿದರು?

______________________________

______________________________

______________________________

೨. ಶತ್ರು ಸೇನೆ ಹಿಮ್ಮೆಟ್ಟಿಸಲು ಆರ್ಕಿಮಿಡೀಸನು ಮಾಡಿದ ಉಪಾಯವೇನು?

______________________________

______________________________

______________________________

೩. ಆರ್ಕಿಮಿಡಿಸ್ ಪ್ರಾಣ ಕಳೆದುಕೊಳ್ಳಬೇಕಾದ ಪ್ರಸಂಗ ತಿಳಿಸಿ.

______________________________

______________________________

______________________________



## ಇ. ಬಿಟ್ಟ ಸ್ಥಳಗಳನ್ನು ಸೂಕ್ತವಾದ ಪದಗಳಿಂದ ಭರ್ತಿ ಮಾಡಿ.

೧. ಆರ್ಕಿಮಿಡೀಸ್ ಒಬ್ಬ ಶ್ರೇಷ್ಠ __________ ಹಾಗೂ __________

೨. ಅವನು ಸತತವಾದ __________ ಹಾಗೂ ಚಿಂತನೆಯಲ್ಲಿ ತೊಡಗಿರುತ್ತಿದ್ದನು.

೩. ಆರ್ಕಿಮಿಡೀಸನ ಜನನ ಕ್ರಿ.ಪೂ. __________

೪. ಆರ್ಕಿಮಿಡೀಸನ ಸಮಾಧಿಯ ಮೇಲೆ ________ ಮತ್ತು ________ ಇರಿಸಲಾಗಿದೆ.

**ಈ) ಈ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಬಳಸಿ ಬರೆಯಿರಿ.**

೧. ಎದೆಗುಂದು : ______________________

೨. ಹಿಮ್ಮೆಟ್ಟು : ______________________

೩. ಆಶ್ರಯದಾತ : ______________________

೪. ತೋಚು : ______________________

## ಭಾಷಾಭ್ಯಾಸ

**ಅ) ಮಾದರಿಯಲ್ಲಿ ಸೂಚಿಸಿದಂತೆ ಪದಗಳನ್ನು ರಚಿಸಿ.**

ಮಾದರಿ. ಗ __ __ : ಗ ದ ಗ

೧. ಕ __ __ ೨. ಜ __ __ ೩. ಸ __ __

**ಆ) ಕೊಟ್ಟಿರುವ ವಿಷಯಗಳ ಕುರಿತು ಮಾತನಾಡಿರಿ.**

೧. ನನ್ನ ಶಾಲೆ ೨. ನನಗೆ ಇಷ್ಟವಾದ ಪ್ರಾಣಿ

**ಇ) ಕೊಟ್ಟಿರುವ ಶಬ್ದಗಳಿಗೆ ಅದೇ ಅರ್ಥ ಕೊಡುವ ಎರಡು ಶಬ್ದಗಳನ್ನು ಯೋಚಿಸಿ ಬರೆಯಿರಿ.**

**ಮಾದರಿ : ರಾಜ : ಅರಸು, ದೊರೆ**

ಯುದ್ಧ : ____________ , ____________

ನೀರು : ____________ , ____________

ಆಕಾಶ : ____________ , ____________

**ಈ) ಈ ಹೇಳಿಕೆಗಳಿಗೆ ಸರಿ ಹೊಂದುವ ಪ್ರಶ್ನೆಗಳನ್ನು ರಚಿಸಿರಿ.**

೧. ರಮೇಶನು ತಳ್ಳಿದ ಕಾರಣ ರಾಜೇಶನು ಕೆಳಗೆ ಬಿದ್ದ.

ಪ್ರಶ್ನೆ : ______________________

೨. ಮಳೆಯಲ್ಲಿ ನೆನೆದದ್ದರಿಂದ ರಾಗಿಣಿಗೆ ಶೀತ ಬಂದಿತು.

ಪ್ರಶ್ನೆ : ______________________

೩. ಮಂಜುನಾಥನು ಕಾಯಿಲೆ ಬಿದ್ದ ಕಾರಣ ಪರೀಕ್ಷೆಗೆ ಗೈರುಹಾಜರಾದ.

ಪ್ರಶ್ನೆ : ______________________________

**ಉ) ಮೇಲೆ ಇರುವ ಹೇಳಿಕೆಗಳಿಗೆ ಸಂಬಂಧಿಸಿದಂತೆ ಈ ಪ್ರಶ್ನೆಗಳಿಗೆ ಉತ್ತರಿಸಿ.**

೧. ರಮೇಶನು ತಳ್ಳದಿದ್ದರೆ ರಾಜೇಶನು ಕೆಳಗೆ ಬೀಳುತ್ತಿದ್ದನೆ?

ಉತ್ತರ : ______________________________

೨. ಮಳೆಯಲ್ಲಿ ನೆನೆಯದಿದ್ದರೆ ರಾಗಿಣಿಗೆ ಶೀತವಾಗುತ್ತಿತ್ತೆ?

ಉತ್ತರ : ______________________________

೩. ಮಂಜುನಾಥ ಕಾಯಿಲೆ ಬೀಳದಿದ್ದರೆ ಪರೀಕ್ಷೆಗೆ ಗೈರುಹಾಜರಾಗುತ್ತಿದ್ದನೆ?

ಉತ್ತರ : ______________________________

## ಚಟುವಟಿಕೆ

೧. ಆರ್ಕಿಮಿಡೀಸ್‌ನಂತೆ ವಿಜ್ಞಾನ ಕ್ಷೇತ್ರಕ್ಕೆ ಕೊಡುಗೆ ನೀಡಿದ ವಿಜ್ಞಾನಿಗಳ ಚಿತ್ರಗಳನ್ನು ಸಂಗ್ರಹಿಸಿರಿ.

೨. ಕರ್ನಾಟಕದ ವಿಜ್ಞಾನಿಗಳ ಸಾಧನೆ ಕುರಿತಾದ ವಿವರ ತಿಳಿಯಿರಿ. ಅವರ ಚಿತ್ರಗಳನ್ನು ಕಲೆ ಹಾಕಿರಿ.





# ನರೇಂದ್ರನ ಸಾಹಸ

**ಜಗದ್ವಿಖ್ಯಾತ ಸ್ವಾಮಿ ವಿವೇಕಾನಂದರ ಬಾಲ್ಯದಲ್ಲಿ ನಡೆದ ಘಟನೆ :**

ವಿವೇಕಾನಂದರ ಬಾಲ್ಯದ ಹೆಸರು ನರೇಂದ್ರ. ನರೇಂದ್ರನಿಗೆ ಒಮ್ಮೆ ತನ್ನ ಮನೆಯ ಹತ್ತಿರದಲ್ಲೇ ಇದ್ದ ವ್ಯಾಯಾಮ ಶಾಲೆಯಲ್ಲಿ ಒಂದು ಉಯ್ಯಾಲೆಯನ್ನು ಕಟ್ಟಬೇಕೆಂದು ಆಸೆಯಾಯಿತು. ಅದಕ್ಕೆ ಒಂದು ಮರದ ತೊಲೆಯನ್ನು ನಿಲ್ಲಿಸಲು ಗೆಳೆಯರ ಜೊತೆ ಬಹಳ ಹೊತ್ತು ಶ್ರಮ ಪಟ್ಟ. ಬಹಳ ಭಾರವಿದ್ದ ತೊಲೆ ಎಷ್ಟು ಪ್ರಯತ್ನಿಸಿದರೂ ಮೇಲೇರಲೇ ಇಲ್ಲ. ರಸ್ತೆಯಲ್ಲಿ ನಿಂತು ನೋಡುವ ಅನೇಕ ಜನರ ಮಧ್ಯದಿಂದ ಆಂಗ್ಲ ನಾವಿಕ ಇವರ ನೆರವಿಗೆ ಬಂದ.

ನಾವಿಕನ ಸಹಾಯದಿಂದ ತೊಲೆ ಮೇಲೇರತೊಡಗಿತು. ಆದರೆ ಅದು ಹಠಾತ್ತನೆ ಜಾರಿ ನಾವಿಕನ ತಲೆಗೆ ಬಲವಾಗಿ ಬಡಿದು ದೊಡ್ಡ ಗಾಯವಾಗಿ ಧಾರಾಕಾರವಾಗಿ ರಕ್ತ ಹರಿಯಿತು. ನಾವಿಕನಿಗೆ ಪ್ರಜ್ಞೆ ತಪ್ಪಿತು. ಇದನ್ನು ನೋಡಿ ಹುಡುಗರೆಲ್ಲ ನಾವಿಕ ಸತ್ತನೆಂದೇ ಭಾವಿಸಿ ಭಯದಿಂದ ಓಡಿ ಹೋದರು. ಆದರೆ ನರೇಂದ್ರ ಮತ್ತು ಒಂದಿಬ್ಬರು ಸ್ನೇಹಿತರು ಮಾತ್ರ ಓಡಿಹೋಗದೇ ಅವನ ಸಹಾಯಕ್ಕೆ ನಿಂತರು.

ನರೇಂದ್ರ ತನ್ನ ಬಟ್ಟೆಯನ್ನು ಒಂದಿಷ್ಟು ಹರಿದು ನಾವಿಕನ ಗಾಯಕ್ಕೆ ಪಟ್ಟಿ ಕಟ್ಟಿ, ಅವನ ಹಣೆಗೆ ತಣ್ಣೀರು ತಟ್ಟಿ ಗಾಳಿ ಹಾಕಲಾರಂಭಿಸಿದ. ರಕ್ತ ಹರಿಯುವುದು ನಿಂತಿತು. ನಾವಿಕನ ಪ್ರಜ್ಞೆಯೂ ಮರಳಿತು. ಎಲ್ಲರೂ ಸೇರಿ ಅವನನ್ನು ಹತ್ತಿರದಲ್ಲೇ ಇದ್ದ ವ್ಯಾಯಾಮ ಶಾಲೆಗೆ ಕರೆತಂದರು. ಡಾಕ್ಟರು ಬಂದರು. ಚಿಕಿತ್ಸೆ ನಡೆಯಿತು. ನರೇಂದ್ರನ ಸೇವೆ – ಶುಶ್ರೂಷೆಗಳಿಂದಾಗಿ ಒಂದು ವಾರದೊಳಗೆ ನಾವಿಕನ ಗಾಯ ವಾಸಿಯಾಯಿತು.



**ಈ ಪ್ರಶ್ನೆಗಳಿಗೆ ಉತ್ತರಿಸಿ.**

1. ನರೇಂದ್ರ ಮರದ ತೊಲೆಯನ್ನು ಏಕೆ ಮೇಲೇರಿಸಲು ಯೋಚಿಸಿದ?
2. ಈ ಹುಡುಗರ ನೆರವಿಗೆ ಬಂದವರು ಯಾರು?
3. ನಾವಿಕನಿಗೆ ಗಾಯವಾದ ತಕ್ಷಣ ಕೆಲ ಹುಡುಗರು ಏಕೆ ಓಡಿ ಹೋದರು?
4. ಗೆಳೆಯರಂತೆ ನರೇಂದ್ರನೂ ಓಡಿ ಹೋಗಿದ್ದರೆ ಏನಾಗುತ್ತಿತ್ತು?

## ಪದ್ಯಪಾಠ – ೩

# ಅಕ್ಕನ ವಚನ

**ಪಾಠಕ್ಕೂ ಮುನ್ನ ...**

ವಚನ ಸಾಹಿತ್ಯ ಜನಸಾಮಾನ್ಯರಿಗೆ ಅರ್ಥವಾಗುವ ಸಾಹಿತ್ಯ. ಶರಣ–ಶರಣೆಯರು ವಚನ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಯನ್ನು ನೀಡಿದ್ದಾರೆ. ಕನ್ನಡದ ಪ್ರಥಮ ಕವಯತ್ರಿ ಆದ ಅಕ್ಕಮಹಾದೇವಿ ಈ ವಚನದಲ್ಲಿ ಜಲ–ನೆಲ–ಆಕಾಶ ಒಂದೇ ಆದರೂ ಹಲವು ದ್ರವ್ಯಗಳು ಕೂಡಿ ವಸ್ತುಗಳ ರುಚಿಯಲ್ಲಿ ಭಿನ್ನತೆಯನ್ನು ಹಾಗೂ ಈ ಭಿನ್ನತೆಯ ಕಾರಣವನ್ನು ಮಾರ್ಮಿಕವಾಗಿ ನಿರೂಪಿಸಿರುವುದನ್ನು ಕಾಣಬಹುದಾಗಿದೆ.



ಈಳೆ ನಿಂಬೆ ಮಾವು ಮಾದಲಕ್ಕೆ
ಹುಳಿ ನೀರನೆರೆದವರಾರಯ್ಯಾ?
ಕಬ್ಬು, ಬಾಳೆ–ಹಲಸು, ನಾರಿವಾಳಕ್ಕೆ
ಸಿಹಿನೀರನೆರೆದವರಾರಯ್ಯಾ?
ಕಳವೆ, ರಾಜಾನ್ನ, ಶಾಲ್ಯನ್ನಕ್ಕೆ
ಓಗರದುದಕವನೆರೆದವರಾರಯ್ಯಾ?
ಮರುಗ ಮಲ್ಲಿಗೆ ಪಚ್ಚೆ ಮುಡಿವಾಳಕ್ಕೆ
ಪರಿಮಳದುದಕವನೆರೆದವರಾರಯ್ಯಾ?
ಇಂತೀ ಜಲವು ಒಂದೆ, ನೆಲವು ಒಂದೆ ಆಕಾಶವು ಒಂದೆ,
ಜಲವು ಹಲವು ದ್ರವ್ಯಂಗಳ ಕೂಡಿ
ತನ್ನ ಪರಿಬೇರಾಗಿಹ ಹಾಗೆ,
ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯನು
ಹಲವು ಜಗಂಗಳ ಕೂಡಿಕೊಂಡಿರ್ದಡೇನು?
ತನ್ನ ಪರಿಬೇರೆ

– **ಅಕ್ಕಮಹಾದೇವಿ**

**ಕ್ಷೇತ್ರ : ಬರೆಯುವುದು**

**ಸಾಮರ್ಥ್ಯ :** ಅಕ್ಷರ ಮತ್ತು ಪದಗಳನ್ನು ಸರಿಯಾದ ವಿನ್ಯಾಸ, ಸೂಕ್ತ ಅಂತರದೊಂದಿಗೆ ಸ್ಫುಟವಾಗಿ ಬರೆಯುವುದು

**ಕವಿ ಕೃತಿ ಪರಿಚಯ**

ಅಕ್ಕಮಹಾದೇವಿಯ ಕಾಲ ಕ್ರಿ.ಶ. ಸುಮಾರು ೧೧೬೦ ಶಿವಶರಣೆಯರಲ್ಲಿ ಪ್ರಮುಖಳು. ಈಕೆಯ ಜನ್ಮಸ್ಥಳ ಶಿಕಾರಿಪುರ ತಾಲೂಕಿನ ಉಡುತಡಿ. ಪ್ರಸಿದ್ಧ ವಚನಕಾರ್ತಿ ಹಾಗೂ ಕವಯಿತ್ರಿ. ಅಕ್ಕಮಹಾದೇವಿಯ ಅಂಕಿತ ಮತ್ತು ಆರಾಧ್ಯದೈವ ಚೆನ್ನಮಲ್ಲಿಕಾರ್ಜುನ. ಈಕೆ ಯೋಗಾಂಗತ್ರಿವಿಧಿ, ಸೃಷ್ಟಿವಚನ ಮತ್ತು ಮಂತ್ರಗೋಪ್ಯ ಮೊದಲಾದ ಲಘು ಕೃತಿಗಳನ್ನು ರಚಿಸಿದ್ದಾಳೆ.

## ಓದಿ ತಿಳಿಯಿರಿ

**ನಾರಿಕೇಳ** – ತೆಂಗಿನಮರ ಮತ್ತು ಅದರ ಕಾಯಿ, **ಕಳವೆ** – ಭತ್ತ, **ಓಗರ** – ಬೇಯಿಸಿದ ಆಹಾರ, **ಉದಕ** – ನೀರು, **ದ್ರವ್ಯ** – ವಸ್ತು, ಸಂಪತ್ತು, **ಎರೆ** – ಸುರಿ, **ಶರಣೆ** – ಶಿವಭಕ್ತೆ

## ಗಮನಿಸಿ ತಿಳಿಯಿರಿ

ಈಳೆ – ಕಿತ್ತಳೆ, ಹೇರಿಳೆ ಮೊದಲಾದ ವರ್ಗಕ್ಕೆ ಸೇರಿದ ಮರ ಮತ್ತು ಹಣ್ಣು

ಮಾದಲ – ಒಂದು ಜಾತಿಯ ಮರ ಮತ್ತು ಅದರ ಹಣ್ಣು

ಮರುಗ – ಸುವಾಸನೆಯ ಎಲೆಗಳುಳ್ಳ ಒಂದು ಜಾತಿಯ ಸಸ್ಯ

ಪಚ್ಚೆ – ಒಂದು ಜಾತಿಯ ಸುವಾಸನೆಯ ಗಿಡ ಮತ್ತು ಅದರಲ್ಲಿ ಬಿಡುವ ತೆನೆ



## ಅಭ್ಯಾಸ

**ಅ. ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಈ ವಚನದಲ್ಲಿ ಹೆಸರಿಸಿರುವ ಹುಳಿಹಣ್ಣುಗಳಾವುವು?

_______________________________________________

೨. ಪರಿಮಳವನ್ನು ಬೀರುವ ಯಾವ ಸಸ್ಯ ಹಾಗೂ ಹೂಗಳ ಹೆಸರುಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ?

_______________________________________________

೩. ಈ ವಚನ ರಚಿಸಿದ ಶರಣೆಯ ಹೆಸರೇನು?

____________________

೪. ಅಕ್ಕಮಹಾದೇವಿಯ ವಚನಗಳ ಅಂಕಿತನಾಮ ಯಾವುದು?

____________________

## ಆ. ಈ ಪ್ರಶ್ನೆಗಳಿಗೆ ೨-೩ ವಾಕ್ಯಗಳಲ್ಲಿ ಉತ್ತರಿಸಿ.

೧. ಈ ವಚನದಲ್ಲಿ ನಿಮಗೆ ಇಷ್ಟವಾದ ೨ ಸಾಲುಗಳಾವುವು? ಏಕೆ?

____________________

____________________

೨. ಚನ್ನಮಲ್ಲಿಕಾರ್ಜುನನ ಪರಿಯನ್ನು ಕವಿಯತ್ರಿ ಹೇಗೆ ವಿವರಿಸಿದ್ದಾರೆ?

____________________

____________________

## ಇ. ಈ ಕೆಳಗಿನ ಪದ್ಯಭಾಗವನ್ನು ಪೂರ್ಣಗೊಳಿಸಿರಿ.

ಕಳವೆ ____________________

____________________ ರಾರಯ್ಯ?

ಮರುಗ ____________________

____________________ ರಾರಯ್ಯ?

## ಈ. ಈ ಕೆಳಗಿನವರ ವಚನಗಳ ಅಂಕಿತವನ್ನು ಶಿಕ್ಷಕರ ಸಹಾಯದಿಂದ ಅರಿಯಿರಿ.

೧. ಬಸವಣ್ಣ
೨. ಚನ್ನಬಸವಣ್ಣ
೩. ಅಲ್ಲಮಪ್ರಭು
೪. ಮುಕ್ತಾಯಕ್ಕ
೫. ಲಿಂಗಮ್ಮ
೬. ಅಕ್ಕಮ್ಮ

### ಚಟುವಟಿಕೆ

ವಚನಕಾರ್ತಿಯರ ಚಿತ್ರಗಳನ್ನು ಸಂಗ್ರಹಿಸಿರಿ.

## ವ್ಯಾಕರಣಾಂಶ

**ಅ. ಈ ಹೇಳಿಕೆಗಳಿಗೆ ಸರಿ ಹೊಂದುವ ಸೂಕ್ತ ಉತ್ತರವನ್ನು ಗುರುತಿಸಿ.**

೧. ಕಾಲಗಳಲ್ಲಿ ಮುಖ್ಯವಾಗಿ ______________ ಬಗೆಗಳಿವೆ

ಅ. ಎರಡು ಆ. ಹತ್ತು ಇ. ಐದು ಈ. ಮೂರು

೨. ಭೂತಕಾಲಕ್ಕೆ ಸರಿಯಾದ ಉದಾಹರಣೆ

ಅ. ಓದಿದನು ಆ. ಓದಲಿಲ್ಲ ಇ. ಓದುತ್ತಾನೆ ಈ. ಓದುವನು

೩. ವರ್ತಮಾನ ಕಾಲಕ್ಕೆ ಸರಿಯಾದ ಉದಾಹರಣೆ

ಅ. ಹಾಡಿದನು ಆ. ಹಾಡುವನು ಇ. ಹಾಡಲಿಲ್ಲ ಈ. ಹಾಡುತ್ತಾನೆ

೪. ಭವಿಷ್ಯತ್ ಕಾಲಕ್ಕೆ ಸರಿಯಾದ ಉದಾಹರಣೆ

ಅ. ತಿನ್ನುವುದಿಲ್ಲ ಆ. ತಿಂದಳು ಇ. ತಿನ್ನುತ್ತಾಳೆ ಈ. ತಿನ್ನುವಳು

**ಆ) ವಾಕ್ಯಗಳು :** ಪದಗಳ ಅರ್ಥಪೂರ್ಣ ಸಮೂಹವನ್ನು ವಾಕ್ಯ ಎನ್ನುತ್ತೇವೆ.

**ಉದಾ :** ಬೆಕ್ಕು ಹಾಲನ್ನು ಕುಡಿಯಿತು.

ಒಂದಕ್ಕಿಂತ ಹೆಚ್ಚಾದ ವಸ್ತುಗಳೆಂದು ತಿಳಿಸುವ ಪದಗಳೆಲ್ಲ ಬಹುವಚನ ಪದಗಳು.

**ಉದಾ :** ಚಿತ್ರಗಳು, ಹಣ್ಣುಗಳು, ಮರಗಳು





# ಹುಲ್ಲಿನ ಎಸಳು

ಅಂದು ಆ ನದಿಗೆ ಪ್ರವಾಹ ಬಂದಿತ್ತು. ದಡದಲ್ಲಿ ಪ್ರವಾಹಕ್ಕೆ ವಿರುದ್ಧವಾಗಿದ್ದ ಗಿಡ, ಬಳ್ಳಿಗಳು ಬೇರು ಸಹಿತ ಕಿತ್ತು ನೀರಿನ ಸೆಳವಿನಲ್ಲಿ ಸಾಗುತ್ತಿದ್ದವು. ಆದರೆ ಬೇರು ಭದ್ರವಾಗಿದ್ದ ಹುಲ್ಲಿನ ಎಸಳು ಮಾತ್ರ ನೀರಿನ ಸೆಳೆತಕ್ಕೆ ಅನುಕೂಲವಾಗಿ ತಲೆಬಾಗಿಸಿಕೊಂಡಿರುವುದನ್ನು ಕಂಡು ತೇಲಿ ಹೋಗುತ್ತಿದ್ದ ಗಿಡ ಹೇಳಿತು –

"ಯಾಕೆ ನೀನು ಸೋತು ತಲೆಬಾಗಿಸಿದ್ದೀಯಾ? ನಮ್ಮೊಂದಿಗೆ ಬಾ. ಎಲ್ಲಾದರೂ ಹೋಗಿ ದಡ ಸೇರೋಣ" ಎಂದು.

ಅದಕ್ಕೆ ಹುಲ್ಲು ಹೇಳಿತು –

"ಹತ್ತರೊಂದಿಗೆ ಹನ್ನೊಂದನೆಯವನಾಗಿ ಗುರಿ ಇಲ್ಲದೆ ಎಲ್ಲೆಂದರಲ್ಲಿಗೆ ಸ್ವಂತ ಅಸ್ತಿತ್ವ ಮರೆತು ಹೋಗುವುದರಿಂದ ಸಿಗುವುದಾದರೂ ಏನು? ಸ್ವಂತಿಕೆಯೂ ಇಲ್ಲದೆ ಮಾತೂ ಬಂದಾದ ಗುಲಾಮತನಕ್ಕಿಂತಲೂ ನಾನಿಲ್ಲಿ ಹೆಜ್ಜೆ ಊರಿ ದೃಢನಾಗಿದ್ದೇನೆ. ಈ ತಲೆತಗ್ಗಿಸುವಿಕೆ ಶಾಶ್ವತವಲ್ಲ. ಪ್ರವಾಹ ಇಳಿಯುತ್ತಲೇ ಮತ್ತೆ ತಲೆ ಎತ್ತುತ್ತೇನೆ" ಎಂದಿತು.



ಆ ಗಿಡ ಬೇರೆ ತಳ ಕಿತ್ತ ಗಿಡಬಳ್ಳಿಗಳೊಂದಿಗೆ ಎಲ್ಲಿಗೆ ಹೋಯಿತೋ ತಿಳಿದಿಲ್ಲ. ಆದರೆ ಪ್ರವಾಹ ಇಳಿಯುತ್ತಲೇ ಹುಲ್ಲು ತಾನು ಹೇಳಿದಂತೆಯೇ ತಲೆ ಎತ್ತಿ ಬೆಳೆಯಿತು.

– ಸಿ. ಉಪೇಂದ್ರ ಸೋಮಯಾಜಿ

೧. ನೀರಿನಲ್ಲಿ ಹರಿಯುತ್ತಿದ್ದ ವಸ್ತುಗಳು ಯಾವುವು?
೨. ಹುಲ್ಲಿಗೆ ಗಿಡ ಏನೆಂದು ಹೇಳಿತು?
೩. ಹುಲ್ಲು ಯಾವಾಗ ತಲೆ ಎತ್ತುತ್ತದೆ?
೪. ಈ ಕಥೆಯಿಂದ ನಿಮಗೇನು ನೀತಿ ತಿಳಿಯುತ್ತದೆ?



## ಗದ್ಯಪಾಠ – ೪

# ಉತ್ತರಕುಮಾರನ ಜಂಭ

**ಪಾಠಕ್ಕೂ ಮುನ್ನ ..**
ಶೌರ್ಯ, ಪರಾಕ್ರಮ ಸಾಹಸಿಗಳ ಸೊತ್ತು. ತುಂಬಿದ ಕೊಡ ತುಳುಕದು ಬೇರೆಯವರೊಂದಿಗೆ ತೋರುಗಾರಿಕೆ, ಸ್ವಪ್ರತಿಷ್ಠೆ ಬಡಾಯಿ ಕೊಚ್ಚಿಕೊಳ್ಳುವುದು ಕೆಲವರ ಹವ್ಯಾಸವಾಗಿರುತ್ತದೆ ಇವರಲ್ಲಿ ಗಟ್ಟಿತನ ಲವಲೇಶವೂ ಇರದು. ಎಲ್ಲವೂ ಟೊಳ್ಳು. ಇಂತಹ ತೋರುಗಾರಿಕೆಯ ಒಣ ಪ್ರತಿಷ್ಠೆಯ ಉತ್ತರಕುಮಾರನ ಕಥೆ ನಾಟಕ ರೂಪದಲ್ಲಿ ಇಲ್ಲಿ ಒಡಮೂಡಿದೆ.

### ದೃಶ್ಯ – ೧

*(ವಿರಾಟನಗರದ ಅರಮನೆ. ಅಲ್ಲಿ ವಿರಾಟರಾಯನ ಮಗ ಯುವರಾಜ ಉತ್ತರ ಕುಮಾರ ಸಿಂಹಾಸನಾರೂಢನಾಗಿದ್ದಾನೆ. ಅವನು ಸುತ್ತಲೂ ಅನೇಕ ಸುಂದರಿಯರು ಇರುವರು. ಅವರಲ್ಲಿ ಅವನ ತಂಗಿ ಉತ್ತರೆಯೂ ಇದ್ದಾಳೆ. ಅವರೆಲ್ಲರೂ ಸಂತೋಷದಿಂದ ಹಾಡಿ ಕುಣಿಯುತ್ತಾ ಮಾತನಾಡುತ್ತಿರುವರು. ಆಗ ಆಸ್ಥಾನಕ್ಕೆ ವಿರಾಟನಗರದ ಗೋಪಾಲಕನು ಓಡೋಡುತ್ತಾ ಬರುತ್ತಾನೆ.)*

**ಗೋಪಾಲಕ** : ಯುವರಾಜ ಉತ್ತರಕುಮಾರರಿಗೆ ಜಯವಾಗಲಿ. ಕೌರವರು ನಮ್ಮ ದನಕರುಗಳನ್ನು ಸೆರೆ ಹಿಡಿದಿದ್ದಾರೆ! ಅಲ್ಲದೇ ನಮ್ಮ ಮೇಲೆ ಯುದ್ಧಕ್ಕೆ ಬಂದಿದ್ದಾರೆ. ದಯಮಾಡಿ ತಾವು ಬಂದು ನಮ್ಮ ದನಕರುಗಳನ್ನು ಬಿಡಿಸಿರಿ!

**ಉತ್ತರಕುಮಾರ** : ಎಲೈ ಹೇಡಿ ಗೋಪಾಲಕನೆ, ಅಂಜುಬುರುಕನೆ ಯುದ್ಧಕ್ಕೆ ಹೆದರಿ ಓಡಿಬಂದಿರುವೆಯಾ? (ಚಪ್ಪಾಳೆ ತಟ್ಟಿ) ಈ ಹೇಡಿ ದನಗಾಹಿಯನ್ನು ಹೊರಗೆ ಹಾಕಿ.

**ಗೋಪಾಲಕ** : ಸ್ವಾಮೀ, ನಾನು ಹೆದರಿ ಬಂದ ಹೇಡಿಯಲ್ಲ. ನಿಮ್ಮ ಸಹಾಯವನ್ನು ಬೇಡಿ ಬಂದಿರುವ ಸೇವಕ. ಈಗ ನೀವು ಯುದ್ಧ ಮಾಡಿ ಕೌರವರನ್ನು ಓಡಿಸಬೇಕು. ದನಕರುಗಳನ್ನ ಬಿಡಿಸಬೇಕು. ಗೋವುಗಳು ಇಲ್ಲದಿದ್ದರೆ ಮಕ್ಕಳು ಹಸಿವಿನಿಂದ ಸಾಯಬೇಕಾಗುತ್ತದೆ.

**ಉತ್ತರಕುಮಾರ** : (ಸುಂದರಿಯರ ಮುಖಗಳನ್ನ ನೋಡುತ್ತಾ) ನಾನು ಯುದ್ಧಕ್ಕೆ ಬಂದರೆ ಆಯಿತು, ಕೌರವರ ಸೈನ್ಯ ಒಂದೇ ಕ್ಷಣದಲ್ಲಿ ನಾಶ. ಆ ಬುದ್ಧಿಗೇಡಿ ಕೌರವರಿಗೆ ಅಷ್ಟೂ ತಿಳಿಯಬೇಡವೇ? ಉತ್ತರಕುಮಾರನೆಂದರೆ ಅವರು ಏನೆಂದು ತಿಳಿದಿದ್ದಾರೆ?

**ಗೋಪಾಲಕ** : ಹೌದು ಸ್ವಾಮಿ. ಮೂರು ಲೋಕಗಳಲ್ಲಿಯೂ ನಿಮ್ಮಂಥ ಶೂರರಿಲ್ಲ. ಕೌರವರಿಗೆಲ್ಲಿ ಗೊತ್ತು ಈ ವಿಚಾರ!

| | | |
|---|---|---|
| ಉತ್ತರಕುಮಾರ | : | ಹೌದು. ಆ ಕೌರವರು ಮಲಗಿದ್ದ ಸಿಂಹವನ್ನು ಕೆರಳಿಸಿದ್ದಾರೆ. ಹಸಿದ ಹುಲಿಯನ್ನು ಕೆಣಕಿದ್ದಾರೆ. ಹುತ್ತದ ಬಾಯಿಗೆ ಕೈಹಾಕಿದ್ದಾರೆ. ಹ್ಞೂಂ! ಆಗಲಿ. ಈಗ ನಾನು ಯುದ್ಧಕ್ಕೆ ಹೊರಡಬೇಕು. ಎಲೈ ಗೋಪಾಲಕನೇ, ಕೌರವರ ಕಡೆ ಯಾರು ಯಾರು ಬಂದಿದ್ದಾರೆ? |
| ಗೋಪಾಲಕ | : | ಸ್ವಾಮಿ... ಕೌರವರ ಕಡೆಯಿಂದ ಭೀಷ್ಮ, ದ್ರೋಣ, ಕರ್ಣ, ಮೊದಲಾದವರೆಲ್ಲಾ ಬಂದಿದ್ದಾರೆ. |
| ಉತ್ತರಕುಮಾರ | : | ನಾನೀಗ ಅಲ್ಲಿ ಯಾರೊಡನೆ ಯುದ್ಧ ಮಾಡಬೇಕು. ನನಗೆ ಎದುರಾಗಿ ನಿಲ್ಲುವವರು ಇವರಲ್ಲಿ ಯಾರಿದ್ದಾರೆ? |
| ಉತ್ತರೆ | : | ಅಣ್ಣಾ.. ನೀನು ಕೌರವರ ಸೈನ್ಯದ ಮುಖಂಡನಾದ ಭೀಷ್ಮನೊಡನೆ ಯುದ್ಧಮಾಡು. ಅವನನ್ನು ಸೋಲಿಸು. |
| ಉತ್ತರಕುಮಾರ | : | ಛೆ! ಛೆ! ಅವನೊಬ್ಬ ಮುದುಕ. ನಾನೋ ನವಯುವಕ! |
| ಉತ್ತರೆ | : | ಹಾಗಾದರೆ ಅಣ್ಣ, ದ್ರೋಣರೊಂದಿಗೆ ಯುದ್ಧ ಮಾಡು. |
| ಉತ್ತರಕುಮಾರ | : | ನಾನಾದರೋ ಕ್ಷತ್ರಿಯ ವೀರ. ಇಂತಹವರೊಂದಿಗೆ ಯುದ್ಧಮಾಡುವುದೇ? ಇಂಥವನನ್ನು ಕೊಂದು ನಾನು ಯಾವ ಪಾಪ ಕಟ್ಟಿಕೊಳ್ಳಲಿ? |
| ಉತ್ತರೆ | : | ಹಾಗಾದರೆ, ಮಹಾಶೂರನೆಂದು ಖ್ಯಾತಿ ಪಡೆದಿರುವ ಕರ್ಣನನ್ನಾದರೂ ಸೋಲಿಸು. |
| ಉತ್ತರ ಕುಮಾರ | : | (ಗಹಗಹಿಸಿ ನಗುತ್ತಾ) ಛೆ! ಛೆ! ಅವನು ಸೂತಪುತ್ರ. |
| ಉತ್ತರೆ | : | ಹಾಗಾದರೆ, ಕೌರವರ ಸೈನ್ಯದ ಮೇಲೆಯೇ ಧಾಳಿಮಾಡಿಬಿಡು. |
| ಉತ್ತರಕುಮಾರ | : | ಮೂಕಪ್ರಾಣಿಗಳ ಮೇಲೆ ಧಾಳಿ ಮಾಡಿದ ಆ ಕೌರವರ ಸೈನ್ಯ ಅದೆಂತಹ ಸೈನ್ಯ? |
| ಉತ್ತರೆ | : | ಅಣ್ಣ ನಿನ್ನಂಥ ವೀರಾಧಿವೀರರು ಯಾರೂ ಇಲ್ಲ. ಬೇಗನೆ ಯುದ್ಧಕ್ಕೆ ಹೋಗಿ ನಮ್ಮ ಗೋವುಗಳನ್ನು ಬಿಡಿಸಿಕೊಂಡು ಬಾ. |
| ಉತ್ತರಕುಮಾರ | : | ಎಲೈ ಸೇವಕರೇ, ನನ್ನ ಖಡ್ಗವೆಲ್ಲಿ? ಬಿಲ್ಲು, ಬಾಣ, ಬತ್ತಳಿಕೆ ಎಲ್ಲವನ್ನೂ ಬೇಗ ತನ್ನಿ. ಎಲೈ ಗೋಪಾಲಕ ನೀನು ಹೋಗಿ ಕೌರವರಿಗೆ 'ನಾನು ಉತ್ತರಕುಮಾರ ಯುದ್ಧಕ್ಕೆ ಬರುವೆನೆಂದು ತಿಳಿಸು' ಇಂದು ಕೌರವರ ಸೈನ್ಯ ಧೂಳಿಪಟವಾದಂತೆಯೇ ಸರಿ. ಆದರೆ.. |

**ಗೋಪಾಲಕ** : ಆದರೆ ಏನು ಯುವರಾಜರೇ..?

**ಉತ್ತರಕುಮಾರ** : ನಾನೇನೋ ಯುದ್ಧಕ್ಕೆ ಸಿದ್ಧ, ನನ್ನ ರಥ ಬಿಲ್ಲುಬಾಣಗಳೂ ಸಿದ್ಧ. ನನ್ನ ರಥದ ಸಾರಥಿಯೇ ಇಲ್ಲವಲ್ಲ! ಹಿಂದಿನ ಯುದ್ಧದಲ್ಲಿ ಅವನು ಮರಣ ಹೊಂದಿದ್ದಾನೆ. ಈಗ ನನಗೊಬ್ಬ ಒಳ್ಳೆಯ ಸಾರಥಿ ಸಿಕ್ಕರೆ ಕೌರವರ ಸೈನ್ಯವನ್ನು ಸಂಪೂರ್ಣ ನಾಶಮಾಡಿಬಿಡುತ್ತೇನೆ.

*(ಅದೇ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಉತ್ತರೆಯ ನಾಟ್ಯವಿದ್ಯೆಯ ಗುರುವಾದ ಬೃಹನ್ನಳೆ ಬರುವಳು.)*

**ಬೃಹನ್ನಳೆ** : ರಾಜಕುಮಾರಿ ಉತ್ತರಾ, ಏನು ಯಾವುದೋ ಗಂಭೀರ ಚಿಂತನೆಯಲ್ಲಿರುವ ಹಾಗಿದೆಯಲ್ಲಾ?

**ಉತ್ತರೆ** : ಹೌದು, ಕೌರವರು ನಮ್ಮ ಗೋವುಗಳನ್ನು ಸೆರೆಹಿಡಿದಿದ್ದಾರೆ. ನಮ್ಮ ಮೇಲೆ ಯುದ್ಧಕ್ಕೂ ಬಂದಿದ್ದಾರೆ. ಈಗ ನನ್ನಣ್ಣನಿಗೆ ಒಬ್ಬ ಸಾರಥಿ ಬೇಕಾಗಿದೆ.

**ಬೃಹನ್ನಳೆ** : ಮಗಳೇ, ನನಗೆ ನೃತ್ಯವಿದ್ಯೆಯನ್ನು ಕಲಿಸುವುದು ಮಾತ್ರ ಗೊತ್ತು.

**ಉತ್ತರೆ** : ನೀವು ಹಿಂದೊಮ್ಮೆ ಅರ್ಜುನನ ಸಾರಥಿಯಾಗಿದ್ದೀರೆಂದು ನನಗೆ ಹೇಳಿದ್ದೀರಿ ಅಲ್ಲವೇ? ಶೂರನಾದ ನನ್ನಣ್ಣನಿಗೆ ನೀವೀಗ ಸಾರಥಿಯಾಗಬೇಕು.

**ಬೃಹನ್ನಳೆ** : ಆಗಲಿ. ನಿನ್ನಣ್ಣನಿಗೆ ತಿಳಿಸು ನಾನು ಅವರ ಸಾರಥಿಯಾಗುತ್ತೇನೆಂದು.



## ದೃಶ್ಯ – ೨

*(ಯುದ್ಧಭೂಮಿಯ ಒಂದು ಭಾಗ. ಉತ್ತರಕುಮಾರ ಕೌರವರ ಸೈನ್ಯವನ್ನು ಕಂಡು ಹೆದರಿ ರಥದಿಂದ ಹಾರಿ ಓಡಿಹೋಗುತ್ತಿದ್ದಾನೆ. ಅವನ ಬೆನ್ನು ಹತ್ತಿ ಸಾರಥಿ ಬೃಹನ್ನಳೆ ಓಡಿ ಬರುತ್ತಿದ್ದಾಳೆ.)*

**ಬೃಹನ್ನಳೆ** : ನಿಲ್ಲು! ಉತ್ತರಕುಮಾರ ನಿಲ್ಲು!

**ಉತ್ತರಕುಮಾರ** : ನಾನು ನಿಲ್ಲುವುದಿಲ್ಲ. ಈ ಯುದ್ಧ ನನ್ನಿಂದ ಸಾಧ್ಯವಿಲ್ಲ. ಅಬ್ಬಾ! ಅದೆಂತಹ ದೊಡ್ಡ ಸೈನ್ಯ! ನಾನು ಯುದ್ಧ ಮಾಡುವುದು ಖಂಡಿತಾ ಸಾಧ್ಯವಿಲ್ಲ.

*(ಬೃಹನ್ನಳೆ ಉತ್ತರಕುಮಾರನನ್ನು ಹಿಡಿದು ನಿಲ್ಲಿಸಿ)*

**ಬೃಹನ್ನಳೆ** : ಯುವರಾಜ, ಯುದ್ಧಭೂಮಿಯಿಂದ ಓಡುವುದು ನಿನಗೆ ಉಚಿತವಲ್ಲ.

**ಉತ್ತರಕುಮಾರ** : ನೀನೆಂಥ ಸಾರಥಿ? ನಾನು ಆಜ್ಞೆ ಮಾಡಿದರೂ ನೀನೇಕೆ ರಥವನ್ನು ನಿಲ್ಲಿಸಲಿಲ್ಲ? ನೀನು ನನ್ನ ಸೇವಕನೆಂದು ತಿಳಿದಿಲ್ಲವೇ? ರಥ ನಿಲ್ಲಿಸದ

ಕಾರಣ ರಥದಿಂದ ಜಿಗಿದೆ. ನೋಡಿದವರೆಲ್ಲಾ ನಗುವಂತೆ ಮಾಡಿದ್ದೀಯ. ನಡೆ ನನ್ನ ಮುಂದೆ ನಿಲ್ಲಬೇಡ.

**ಬೃಹನ್ನಳೆ** : ಎಲೈ ಉತ್ತರಕುಮಾರ, ಅರಮನೆಯಲ್ಲಿ ಸುಂದರಿಯರ ಎದುರಿಗೆ ಏನೆಂದು ಜಂಭಕೊಚ್ಚಿಕೊಂಡೆ? ಈಗ ಆ ಶೌರ್ಯ ಎಲ್ಲಿ ಹೋಯಿತು?

**ಉತ್ತರಕುಮಾರ** : ಅದೆಲ್ಲ ನಿನಗೇಕೆ? ನನಗೆ ಈ ಯುದ್ಧ ಬೇಡ. ರಥವನ್ನು ವಿರಾಟನಗರಕ್ಕೆ ಹಿಂದಿರುಗಿಸು.

**ಬೃಹನ್ನಳೆ** : ನಾನು ನಿನ್ನನ್ನು ಬಿಡುವುದಿಲ್ಲ. ಈ ಖಡ್ಗ ತೆಗೆದುಕೋ. ನಡೆ ಯುದ್ಧಕ್ಕೆ.

**ಉತ್ತರಕುಮಾರ** : ಅಯ್ಯೋ, ಸಾರಥಿ. ನಾನು ಯುದ್ಧದಲ್ಲಿ ಸಾಯುವ ಬದಲು, "ಇದೋ ತೆಗೆದುಕೋ ಈ ಖಡ್ಗವನ್ನು, ನೀನೇ ನನ್ನನ್ನು ಕೊಂದುಬಿಡು."

**ಬೃಹನ್ನಳೆ** : ಉತ್ತರಕುಮಾರ ಇದೆಂತಹ ಮಾತುಗಳನ್ನಾಡುತ್ತಿದ್ದೀಯೆ? ನಾನಿದ್ದೇನೆ ಹೆದರಬೇಡ.

**ಉತ್ತರಕುಮಾರ** : ಹಾಗಾದರೆ ನೀನೇ ಯುದ್ಧ ಮಾಡುವೆಯಾ?

**ಬೃಹನ್ನಳೆ** : ಹೌದು. ನಾನೇ ಯುದ್ಧ ಮಾಡುವೆ. ನೀನು ನನಗೆ ಸಾರಥಿಯಾಗು.

**ಉತ್ತರಕುಮಾರ** : ನೀನೇನು ಅರ್ಜುನನ ಸಾರಥಿಯೋ? ಅಥವಾ ನೀನೇ ಅರ್ಜುನನೋ?

**ಬೃಹನ್ನಳೆ** : ಹೌದು. ನಾನೇ ಅರ್ಜುನ. ಹೆದರಬೇಡ. ನನಗೆ ಸಾರಥಿಯಾಗು ನಡೆ.

**ಉತ್ತರಕುಮಾರ** : ಆಗಲಿ. ನೀನು ಹೇಳಿದಂತೆ ಕೇಳುತ್ತೇನೆ.

*(ಅರ್ಜುನ ಸಾರಥಿಯ ಸ್ಥಾನದಲ್ಲಿ ಕುಳಿತು ರಥ ಹೊರಡಿಸುತ್ತಾನೆ. ಅಂದಿಗೆ ಒಂದು ವರ್ಷದ ಅಜ್ಞಾತವಾಸ ಮುಗಿಯಿತು. ಅರ್ಜುನನು ಬೃಹನ್ನಳೆಯ ವೇಷ ತೆಗೆದು ರಣರಂಗದಲ್ಲಿ ವೀರಾವೇಶದಿಂದ ಹೋರಾಡಿದನು. ಕೌರವರ ಸೈನ್ಯ ದಿಕ್ಕೆಟ್ಟು ಓಡಿತು. ಗೋವುಗಳನ್ನು ಬಿಡಿಸಿಕೊಂಡು ಬಂದ ಅರ್ಜುನ ವಿಜಯದ ಉತ್ಸಾಹದಿಂದ ಪುರಪ್ರವೇಶ ಮಾಡುತ್ತಾನೆ.)*

**ಕ್ಷೇತ್ರ** : ಬರೆಯುವುದು

**ಸಾಮರ್ಥ್ಯ** : ಅಪರಿಚಿತ ಸನ್ನಿವೇಶಗಳಲ್ಲಿನ ಸರಳ ಸಂಭಾಷಣೆ ಮತ್ತು ಸಂವಾದಗಳನ್ನು ಅರ್ಥಮಾಡಿಕೊಳ್ಳುವುದು.

**ಆಶಯ :** ಬಡಾಯಿ ಕೊಚ್ಚಿ ಕೊಳ್ಳುವುದರಿಂದ ಯಾವುದೇ ಲಾಭವಿಲ್ಲ. ಶಕ್ತಿ ಸಾಮರ್ಥ್ಯ. ಯೋಗ್ಯತೆಗಳನ್ನು ಹೆಚ್ಚಿಸಿಕೊಂಡಾಗ ಬದುಕು ಬಂಗಾರವಾಗುವುದು ಎಂಬ ಆಶಯ ಇಲ್ಲಿಯದು.

## ಓದಿ ತಿಳಿಯಿರಿ

ಅರಮನೆ – ರಾಜನ ಮನೆ ; ಆಸ್ಥಾನ – ರಾಜಸಭೆ ; ದನಗಾಹಿ – ದನಗಳನ್ನು ಕಾಯುವವನು; ಬುದ್ಧಿಗೇಡಿ – ಬುದ್ಧಿ ಇಲ್ಲದವ, ಮೂರ್ಖ; ಮುಖಂಡ – ನೇತಾರ, ಮುಖ್ಯಸ್ಥ; ಗೋವು – ದನಕರು; ಸಾರಥಿ – ಚಾಲಕ ; ಜಗಿ – ಹಾರು, ನೆಗೆ; ಉಚಿತವಲ್ಲ – ಯೋಗ್ಯವಲ್ಲ; ಧೂಳಿಪಟ– ನಾಶ.

## ಗಮನಿಸಿ ತಿಳಿಯಿರಿ

**ಕೌರವರು** – ಕುರುವಂಶದ ದೃತರಾಷ್ಟ್ರನ ಮಕ್ಕಳು

**ಮೂರು ಲೋಕ** – ಸ್ವರ್ಗ, ಮರ್ತ್ಯ ಮತ್ತು ಪಾತಾಳ ಲೋಕಗಳು.

**ಉತ್ತರೆ** – ಮತ್ಸ್ಯದೇಶದ ಅರಸನಾದ ವಿರಾಟ ರಾಜನ ಮಗಳು.

**ಬೃಹನ್ನಳೆ** – ಅಜ್ಞಾತವಾಸದಲ್ಲಿದ್ದಾಗ ಅರ್ಜುನ ವಿರಾಟನ ಮಗಳಿಗೆ ನಾಟ್ಯ ವಿದ್ಯೆ ಕಲಿಸುವಾಗ ಈ ಹೆಸರನ್ನು ಇಟ್ಟುಕೊಂಡಿದ್ದ.



## ಅಭ್ಯಾಸ

**ಅ) ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಉತ್ತರದಿಂದ ತುಂಬಿರಿ.**

೧. ಕೌರವರು ನಮ್ಮ ____________ ಗಳನ್ನು ಸೆರೆಹಿಡಿದಿದ್ದಾರೆ.

೨. ಉತ್ತರಕುಮಾರ ____________ ನಗರದ ರಾಜಕುಮಾರ.

೪. ಶೂರನಾದ ನನ್ನಣ್ಣನಿಗೆ ನೀವೀಗ ____________ ಆಗಬೇಕು.

೫. ಉತ್ತರೆಯ ನಾಟ್ಯ ಗುರು ____________

**ಆ) ಈ ಮಾತುಗಳನ್ನು ಯಾರು ಹೇಳಿದರೆಂದು ಗೆರೆ ಎಳೆದು ಹೊಂದಿಸಿರಿ.**

| ಅ | ಆ |
|---|---|
| ೧. "ಮೂರು ಲೋಕಗಳಲ್ಲಿಯೂ ನಿಮ್ಮಂಥ ಶೂರರಿಲ್ಲ." | ಅ. ಕೌರವ |
| ೨. "ಶೂರನಾದ ನನ್ನಣ್ಣನಿಗೆ ಸಾರಥಿಯಾಗಬೇಕು." | ಆ. ಉತ್ತರ ಕುಮಾರ |
| ೩. "ನೀನೇನು ಅರ್ಜುನನ ಸಾರಥಿಯೋ?" | ಇ. ಬೃಹನ್ನಳೆ |
| ೪. "ಹೌದು. ನಾನೇ ಅರ್ಜುನ." | ಈ. ಗೋಪಾಲಕ |
| | ಉ. ಉತ್ತರೆ |

ಇ) ಈ ಪ್ರಶ್ನೆಗಳಿಗೆ ೨-೩ ವಾಕ್ಯಗಳಲ್ಲಿ ಉತ್ತರಿಸಿ.

೧. ಗೋಪಾಲಕನನ್ನು ಹೊರಗೆ ಹಾಕಿ ಎಂದು ಉತ್ತರಕುಮಾರ ಹೇಳಿದ್ದೇಕೆ?

೨. ಉತ್ತರಕುಮಾರ ಭೀಷ್ಮ, ದ್ರೋಣ, ಕರ್ಣರೊಂದಿಗೆ ಯುದ್ಧ ಮಾಡಲು ನಿರಾಕರಿಸಲು ಕಾರಣವೇನು?

ಈ) ಈ ಪದಗಳಿಗೆ ಸಮಾನಾರ್ಥಕ ಪದಗಳನ್ನು ಬರೆಯಿರಿ.

ಶೂರ : ______________ , ______________

ಅಪ್ಪ : ______________ , ______________

ಸಾಗರ : ______________ , ______________

ಯುದ್ಧ : ______________ , ______________

## ಭಾಷಾಭ್ಯಾಸ

ಅ. ಮಾದರಿಯಂತೆ ಬರೆಯಿರಿ.

ಮಾದರಿ : ಬಂದಿದೆ – ಬರುತ್ತದೆ

೧. ಹೋಗಿದೆ –

೨. ನೋಡಿದೆ –

೩. ಮಾಡಿದೆ –

೪. ಕೂಡಿದೆ –



ಆ. ಕೊಟ್ಟಿರುವ ಪದ/ಪದಗುಚ್ಛಗಳನ್ನು ಬಳಸಿಕೊಂಡು ಸ್ವಂತ ವಾಕ್ಯ ರಚನೆ ಮಾಡಿರಿ.

೧. ಎದುರು ನಿಲ್ಲು : ______________________________

೨. ಗಹಗಹಿಸಿ ನಗು : ______________________________

೩. ಸೆರೆಹಿಡಿ : ______________________________

೪. ಬೆನ್ನುಹತ್ತು : ______________________________

೫. ದಿಕ್ಕೆಟ್ಟು ಓಡು : ______________________________

ಇ) ಈ ಪದಗಳನ್ನು ಸರಿಯಾಗಿ ಜೋಡಿಸಿ ಅರ್ಥಪೂರ್ಣ ವಾಕ್ಯ ರಚಿಸಿರಿ.

೧. ಸೆರೆಹಿಡಿದಿದ್ದಾರೆ ನಮ್ಮ ಕೌರವರು ಗೋವುಗಳನ್ನು

______________________________

೨. ಯುದ್ಧ ಹಾಗಾದರೆ ಮಾಡುವೆಯಾ? ನೀನೇ

______________________________

೩. ಯಾರೂ ಅಣ್ಣ ವೀರಾಧಿವೀರರು ನಿನ್ನಂಥ ಇಲ್ಲ

______________________________

೪. ಮಾಡಿ ಓಡಿಸಬೇಕು ನೀವು ಯುದ್ಧ ಕೌರವರನ್ನ

______________________________

## ಸಾಮರ್ಥ್ಯ ಆಧಾರಿತ ಅಭ್ಯಾಸ



ಅ) ಈ ಸಂಭಾಷಣೆಯನ್ನು ಗಮನಿಸಿ.

**ಗೋಪಾಲಕ** : ಯುವರಾಜ ಉತ್ತರಕುಮಾರರಿಗೆ ಜಯವಾಗಲಿ. ಕೌರವರು ನಮ್ಮ ದನಕರುಗಳನ್ನು ಹಿಡಿದಿದ್ದಾರೆ! ಅಲ್ಲದೇ ನಮ್ಮ ಮೇಲೆ ಯುದ್ಧಕ್ಕೆ ಬಂದಿದ್ದಾರೆ. ದಯಮಾಡಿ ತಾವು ಬಂದು ನಮ್ಮ ದನಕರುಗಳನ್ನು ಬಿಡಿಸಿರಿ!

**ಉತ್ತರಕುಮಾರ** : ಎಲೈ ಹೇಡಿ ಗೋಪಾಲಕನೇ, ಅಂಜುಬುರುಕನೇ ಯುದ್ಧಕ್ಕೆ ಹೆದರಿ ಓಡಿಬಂದಿರುವೆಯಾ? (ಚಪ್ಪಾಳೆ ತಟ್ಟಿ) ಈ ಹೇಡಿ ದನಗಾಹಿಯನ್ನು ಹೊರಗೆ ಹಾಕಿ.

ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.

೧. ರಾಜನ ಸಹಾಯ ಬೇಡಿ ಬಂದವರು ಯಾರು?
೨. ಸಹಾಯ ಬೇಡಿ ಬಂದವನಿಗೆ ರಾಜ ನೀಡಿದ ಪ್ರತಿಕ್ರಿಯೆ ಏನು?
೩. ದನಕರುಗಳನ್ನು ಹಿಡಿದವರು ಯಾರು?

ಆ) ನಾಟಕ ರೂಪದಲ್ಲಿರುವ ಈ ಪಾಠವನ್ನು ಶಿಕ್ಷಕರ ಸಹಾಯದಿಂದ ನಿಮ್ಮ ಶಾಲಾ ವಾರ್ಷಿಕೋತ್ಸವದಲ್ಲಿ ಅಭಿನಯಿಸಿರಿ.

## ಗದ್ಯಪಾಠ – ೫

# ರಸ್ತೆ ನಿಯಮಗಳು

**ಪಾಠಕ್ಕೂ ಮುನ್ನ ..**

ಯಾವುದೇ ಕಾರ್ಯ ನಿರ್ವಹಿಸುವಾಗ ಶಿಸ್ತು, ಶಾಂತಿ, ಸಂಯಮ ಅಗತ್ಯ. ನಿಯಮಗಳು ನಮಗಾಗಿ, ನಮ್ಮ ಒಳಿತಿಗಾಗಿ ರಚಿತವಾಗಿರುತ್ತದೆ. ರಸ್ತೆಗಳು ದೇಶದ ನರನಾಡಿಗಳಿದ್ದಂತೆ. ರಸ್ತೆಯ ಅಪಘಾತಗಳು ಬಹಳ ಆತಂಕಕಾರಿ. ರಸ್ತೆಯ ನಿಯಮಗಳ ಪಾಲನೆಯಿಂದ ನಾವೂ ಸುರಕ್ಷಿತರಾಗಿರುತ್ತೇವೆ ಇತರರೂ ಸುರಕ್ಷಿತ. ಬನ್ನಿ ಅಪಘಾತಗಳನ್ನು ತಪ್ಪಿಸುವಲ್ಲಿ ನಮ್ಮ ಪಾಲೂ ಇರಲಿ.

ಅಮೂಲ್ಯ ರಜೆಗೆ ಚಿತ್ರದುರ್ಗದ ತನ್ನ ಮಾಮನ ಮನೆಗೆ ಬಂದಿದ್ದಳು. ಆಕೆ ಇದ್ದದ್ದು ಚಿತ್ರದುರ್ಗದ ಸಮೀಪದ ಪುಟ್ಟ ಹಳ್ಳಿಯಲ್ಲಿ. ಆ ಹಳ್ಳಿಗೆ ಬಸ್ಸಿನ ಸಂಪರ್ಕವಿರಲಿಲ್ಲ. ಹಾಗಾಗಿ ಆಕೆ ಚಿತ್ರದುರ್ಗ ನಗರವನ್ನು ನೋಡಿಯೇ ಇರಲಿಲ್ಲ. ಮೊದಲ ಬಾರಿ ಚಿತ್ರದುರ್ಗ ನಗರವನ್ನು ಕಂಡಾಕ್ಷಣ ಆಕೆಗೆ ಭಯವಾಗಿತ್ತು. 'ಎಷ್ಟೊಂದು ಜನ, ಎಷ್ಟೊಂದು ವಾಹನಗಳು!' ಎಂದು ಮಾಮನ ಬಳಿ ಹೇಳಿದ್ದಳು. ಅವಳ ಮಾತಿಗೆ ಮಾಮ ನಕ್ಕಿದ್ದ. ಎರಡು ದಿನ ಮನೆಯಲ್ಲಿ ಮಜವಾಗಿ ಆಟವಾಡಿ ಅಂತೂ ಅವಳು ಬಹಳ ಆಸೆ ಇಟ್ಟುಕೊಂಡಿದ್ದ ಚಿತ್ರದುರ್ಗ ಕೋಟೆಯನ್ನು ನೋಡಲು ಮಾಮನ ಜೊತೆ ಹೊರಟು ನಿಂತಳು. ಮನೆಯಿಂದ ಹೊರ ಬಂದು ಮುಖ್ಯ ರಸ್ತೆಯ ಬದಿಯಲ್ಲಿ ಚಲಿಸತೊಡಗಿದರು. ಸಹಜವಾಗಿ ಕುತೂಹಲಿಯಾದ ಅಮೂಲ್ಯ ತನ್ನ ಪ್ರಶ್ನೆಗಳನ್ನು ಮಾಮನ ಬಳಿ ಬಿಚ್ಚಿಟ್ಟಳು.





**ಅಮೂಲ್ಯ** : ಮಾಮಾ, ಇಲ್ಲಿ ಜನ ರಸ್ತೆಯನ್ನು ದಾಟುವುದು ಎಷ್ಟು ಕಷ್ಟ ಅಲ್ಲವೇ?

**ಮಾಮ** : ಹೌದೇ? ನಿನಗೆ ಹಾಗೆ ಅನ್ನಿಸುತ್ತದೆಯೇ? ನಗರದಲ್ಲೇ ವಾಸವಾಗಿರುವ ನಮಗೆ ಅದು ಅಷ್ಟೇನೂ ಕಷ್ಟ ಅನ್ನಿಸುವುದಿಲ್ಲ.

**ಅಮೂಲ್ಯ** : ನನಗಂತೂ ಈ ಜನಸಂದಣಿ, ವಾಹನಗಳನ್ನು ನೋಡಿದರೆ ತಲೆ ಚಕ್ರ ಬಂದಂತಾಗುತ್ತಿದೆ.

**ಮಾಮ** : ಇದು ಮೊದಲ ಬಾರಿ ಅಲ್ಲವೇ, ಅದಕ್ಕೇ ಹಾಗಾಗುತ್ತಿದೆ. ಇಲ್ಲೇ ಪಾರ್ಕಿನಲ್ಲಿ ಸ್ವಲ್ಪ ಹೊತ್ತು ಕುಳಿತು ಸುಧಾರಿಸಿಕೊಳ್ಳೋಣವೇ?

**ಅಮೂಲ್ಯ** : ಅಯ್ಯೋ ಬೇಡ ಮಾಮಾ. ನಾನು ಮೊದಲು ಕೋಟೆ ನೋಡಬೇಕು..

**ಮಾಮ** : ಆಯ್ತು. ಹಾಗಾದರೆ ಈಗ ನಾವು ಈ ರಸ್ತೆಯನ್ನು ದಾಟೋಣ. ಅಲ್ಲಿಂದ ನೇರವಾಗಿ ನಡೆದರೆ ಕೋಟೆಯ ಮುಖ್ಯದ್ವಾರದೆಡೆ ಹೋಗಬಹುದು.

**ಅಮೂಲ್ಯ** : ಅರೆ! ಈ ರಸ್ತೆಯನ್ನು ದಾಟುವುದಾ? ಅದು ಸಾಧ್ಯವಿಲ್ಲ ಅನ್ನಿಸುತ್ತಿದೆ!

**ಮಾಮ** : ಇಲ್ಲಿ ನೋಡು.. ರಸ್ತೆಯನ್ನು ದಾಟಲು ಕೆಲವು ನಿಯಮಗಳಿವೆ. ಅವುಗಳನ್ನು ಪಾಲಿಸಿದರೆ ಯಾವ ತೊಂದರೆಯೂ ಆಗುವುದಿಲ್ಲ.

**ಅಮೂಲ್ಯ** : ಆದರೆ ರಸ್ತೆ ಮೇಲೆ ಹೋಗುವ ವಾಹನದ ಚಾಲಕರು ನಮ್ಮ ಮೇಲೇ ವಾಹನ ಚಲಾಯಿಸಿದರೆ?

**ಮಾಮ** : ನಮ್ಮಂತಹ ಪಾದಚಾರಿಗಳಿಗೆ ಹೇಗೆ ಕೆಲವೊಂದು ನಿರ್ದಿಷ್ಟ ನಿಯಮಗಳಿರುತ್ತವೋ ಹಾಗೆಯೇ ವಾಹನ ಚಾಲಕರಿಗೂ ನಿಯಮಗಳಿರುತ್ತವೆ. ನಾವು ಯಾವಾಗಲೂ ಪಾದಚಾರಿಗಳ ಜಾಗದ ರಸ್ತೆಯ ಮೇಲೆ ಎಡಭಾಗದಲ್ಲೇ ಚಲಿಸಬೇಕು.







**ಅಮೂಲ್ಯ** : ಹೌದೇ?

**ಮಾಮ** : ಹೌದು. ಈಗ ನೋಡು. ನಾವು ಈ ರಸ್ತೆಯನ್ನು ದಾಟಬೇಕು ಅಂದರೆ ಎಲ್ಲಿ ಬೇಕೋ ಅಲ್ಲಿ ದಾಟುವಂತಿಲ್ಲ. ಯಾವ ಸಮಯದಲ್ಲಾದರೂ ದಾಟುವಂತಿಲ್ಲ.

**ಅಮೂಲ್ಯ** : ಮತ್ತೆ?

**ಮಾಮ** : ವಾಹನಗಳು ನಿಲ್ಲಲು, ಚಲಿಸಲು, ಚಲಿಸುವುದಕ್ಕೋಸ್ಕರ ಸಿದ್ಧರಾಗಲು ಟ್ರಾಫಿಕ್ ಸಿಗ್ನಲ್ ಲೈಟ್‌ಗಳಿವೆ. ಅದೋ ಅಲ್ಲಿ ಕಾಣುತ್ತಿವೆಯಲ್ಲಾ ಅವೇ. ಕೆಂಪು ದೀಪ ಹತ್ತಿದರೆ ಎದುರು ರಸ್ತೆಯ ವಾಹನ ಚಾಲಕರು ತಮ್ಮ ವಾಹನವನ್ನು ನಿಲ್ಲಿಸಿಕೊಳ್ಳಬೇಕು. ಹಳದಿ ದೀಪ ಹತ್ತಿದಾಕ್ಷಣ ವಾಹನವನ್ನು ಚಾಲನೆಯಲ್ಲಿಟ್ಟು ಹೊರಡಲು ಸಿದ್ಧರಾಗಬೇಕು ಹಾಗೂ ಹಸಿರು ದೀಪ ಬಂದಾಗ ಹೊರಡಬೇಕು.

**ಅಮೂಲ್ಯ** : ಹಾಗಾದರೆ ನಾವು ಕೆಂಪು ದೀಪ ಹತ್ತಿ ವಾಹನಗಳು ನಿಂತಾಕ್ಷಣ ರಸ್ತೆ ದಾಟಬೇಕು ಅಲ್ಲವೇ?

**ಮಾಮ** : ಹೌದು. ಆದರೆ ಪಾದಚಾರಿಗಳು ರಸ್ತೆ ದಾಟಲೆಂದೇ ಝೀಬ್ರಾ ಪಟ್ಟಿಗಳು ಇರುತ್ತವೆ. ಅದೋ ನೋಡು ಅಲ್ಲಿದೆ. ನಡೆ ಅತ್ತ ಕಡೆ ನಡೆದು ರಸ್ತೆ ದಾಟೋಣ.

(ಇಬ್ಬರೂ ರಸ್ತೆಯನ್ನು ದಾಟುವರು)

**ಅಮೂಲ್ಯ** : ಅರೆ.. ಎಷ್ಟು ಸುಲಭವಾಗಿ ರಸ್ತೆ ದಾಟಿಬಿಟ್ಟೆವಲ್ಲ! ಈ ರಸ್ತೆಯ ನಿಯಮ ನನಗೆ ಬಹಳ ಇಷ್ಟವಾಯಿತು. ಇನ್ನು ನಾನು ಈ ನಗರದಲ್ಲಿ ಆರಾಮವಾಗಿ ಓಡಾಡುವೆ.





**ಮಾಮ** : ಒಳ್ಳೆಯದು. ಆದರೆ ಮಕ್ಕಳು ರಸ್ತೆ ದಾಟುವಾಗ ದೊಡ್ಡವರು ಒಬ್ಬರು ಜೊತೆಯಲ್ಲಿರಬೇಕು. ಅಲ್ಲದೇ ರಸ್ತೆಯನ್ನು ದಾಟುವಾಗ ಇನ್ನೂ ಹಲವಾರು ನಿಯಮಗಳು ಇವೆ. ರಸ್ತೆ ದಾಟುವಾಗ ಎಡ ಬಲ ನೋಡಿ ದಾಟಬೇಕು. ದಾಟುವಾಗ ಅವಸರ ಮಾಡಬಾರದು, ಓಡಬಾರದು. ಜಾರಿ ಬೀಳುವ ಸಾಧ್ಯತೆ ಇರುತ್ತದೆ.

**ಅಮೂಲ್ಯ** : ಅಲ್ಲಿ ಕಾಣುತ್ತಿರುವುದೇನು ಮಾಮಾ?

**ಮಾಮ** : ಅದು ಚಿಹ್ನಾ ಫಲಕ (ಸೈನ್ ಬೋರ್ಡ್) ಆ ರೀತಿಯ ಚಿಹ್ನಾ ಫಲಕಗಳು ಅದೆಷ್ಟೋ ಇರುತ್ತವೆ. ಅವು ವಿವಿಧ ರೀತಿಯ ಮಾಹಿತಿಯನ್ನು ಕೊಡುತ್ತವೆ. ಉದಾಹರಣೆಗೆ ಇಲ್ಲಿ ಶಾಲೆಯಿದೆ, ಹತ್ತಿರದಲ್ಲಿ ಆಸ್ಪತ್ರೆ ಇದೆ, ಮುಂದೆ ತಿರುವು ಇದೆ ಇತ್ಯಾದಿ ಮಾಹಿತಿಗಳಿಂದ ಚಾಲಕರು ಜಾಗರೂಕರಾಗುತ್ತಾರೆ.

**ಅಮೂಲ್ಯ** : ಓಹೋ ರಸ್ತೆಯಲ್ಲೇ ಓದಿ ತಿಳಿದುಕೊಳ್ಳುವ ಎಷ್ಟೋ ಅವಕಾಶಗಳಿರುತ್ತವೆ. ನಾನು ಅವನ್ನೆಲ್ಲಾ ತಿಳಿದುಕೊಳ್ಳಬೇಕಲ್ಲ.. ಮಾಮಾ.

**ಮಾಮ** : (ನಗುತ್ತ) ಆಯ್ತು ತಿಳಿದುಕೊಳ್ಳುವಿಯಂತೆ. ಮನೆಗೆ ಹೋದಾಕ್ಷಣ ಅದಕ್ಕೆ ಸಂಬಂಧಿಸಿದ ಪುಸ್ತಕದ ಮೂಲಕ ತಿಳಿಸಿ ಹೇಳುತ್ತೇನೆ. ಅಗೋ ನೋಡು ನಿನ್ನ ಪ್ರಿಯವಾದ ಚಿತ್ರದುರ್ಗದ ಕಲ್ಲಿನ ಕೋಟೆ ಬಂತು.

**(ಪ್ರವೇಶ ದ್ವಾರದ ಬಳಿ ಇರುವ 'ಇಲ್ಲಿ ಟಿಕೆಟ್ ಕೊಳ್ಳಿ' ಎಂಬ ಸೂಚನೆಯ ಫಲಕ ನೋಡಿಕೊಂಡು ಅತ್ತ ನಡೆದು ಟಿಕೇಟ್ ಪಡೆದು ಒಳಗೆ ನಡೆದರು.)**

**ಕ್ಷೇತ್ರ** : ಬರೆಯುವುದು

**ಸಾಮರ್ಥ್ಯ** : ಸೂಚನೆಗಳನ್ನು ಅನುಸರಿಸಿ ಸ್ವಂತ ವಾಕ್ಯ ಬರೆಯುವುದು



## ಓದಿ ತಿಳಿ

ಜನಸಂದಣಿ – ಜನರು ಇರುವ ಸ್ಥಳ ; ಪಾರ್ಕು–ಉದ್ಯಾನವನ ; ಜಾಗರೂಕತೆ – ಎಚ್ಚರದಿಂದಿರುವ; ತಿರುವು – ಹೊರಳುವ ದಾರಿ, ದ್ವಾರ – ಬಾಗಿಲು, ನಿರ್ದಿಷ್ಟ – ಗೊತ್ತುಪಡಿಸಿದ, ಸ್ಪಷ್ಟಪಡಿಸಿದ

## ಗಮನಿಸಿ ತಿಳಿ

ಚಿಹ್ನಾ ಫಲಕ – ರಸ್ತೆಯ ಎಡ ಬಲ ಬದಿಯಲ್ಲಿ ವಿವಿಧ ವಿಷಯದ ಮಾಹಿತಿಯನ್ನು ಚಿಹ್ನೆಗಳ ಮೂಲಕ ತಿಳಿಸುವ ಫಲಕ. ಕುತೂಹಲ – ತಿಳಿದುಕೊಳ್ಳಬೇಕೆಂಬ ಅಪೇಕ್ಷೆ.

## ಅಭ್ಯಾಸ

**ಅ) ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಅಮೂಲ್ಯ ಎಲ್ಲಿಗೆ ಹೊರಟಿದ್ದಳು?

______________________________

೨. ರಸ್ತೆಯನ್ನು ದಾಟುವ ಸರಿಯಾದ ಸ್ಥಳ ಯಾವುದು?

______________________________

೩. ರಸ್ತೆಯ ಯಾವ ಬದಿಯಲ್ಲಿ ಚಲಿಸಬೇಕು?

______________________________

**ಆ) ಈ ಪ್ರಶ್ನೆಗಳಿಗೆ ೨-೩ ವಾಕ್ಯಗಳಲ್ಲಿ ಉತ್ತರಿಸಿರಿ.**

೧. ರಸ್ತೆ ದಾಟುವಾಗ ಯಾವ ಯಾವ ನಿಯಮಗಳನ್ನು ಅನುಸರಿಸಬೇಕು?

______________________________

______________________________

______________________________

೨. ದಿನನಿತ್ಯ ನೀವು ರಸ್ತೆ ಬದಿಯಲ್ಲಿ ಕಾಣುವ ಟ್ರಾಫಿಕ್ ಚಿಹ್ನೆಗಳನ್ನು ವಿವರಿಸಿ.

______________________________

______________________________

______________________________



**ಇ) ಇವುಗಳು ಸರಿಯೇ ತಪ್ಪೇ ತಿಳಿಸಿರಿ.**

೧. ರಸ್ತೆಯ ಮಧ್ಯೆ ನಾವು ಮಾತನಾಡುತ್ತಾ ನಿಲ್ಲಬಹುದು. ಸರಿ/ತಪ್ಪು

೨. ರಸ್ತೆ ದಾಟುವಾಗ ಎಡ ಬದಿ ನೋಡಿದರೆ ಸಾಕು. ಸರಿ/ತಪ್ಪು

೩. ಟ್ರಾಫಿಕ್ ಸಿಗ್ನಲ್ ಕೆಂಪು ದೀಪ ತೋರಿಸಿದಾಗ ನಾವು ಚಲಿಸಬೇಕು. ಸರಿ/ತಪ್ಪು

೪. ವಾಹನ ನಡೆಸುವ ಚಾಲಕರು ಮೊಬೈಲ್‌ನಲ್ಲಿ ಮಾತನಾಡಬಾರದು ಸರಿ/ತಪ್ಪು

**ಈ) ಕ್ರಮವಾಗಿ ಹೊಂದಿಸಿ ಬರೆಯಿರಿ.**

| ಅ | ಬ | |
|---|---|---|
| ೧. 'ಸಿದ್ಧರಾಗಿ' | ಕೆಂಪು ದೀಪ | ________ |
| ೨. 'ಚಲಿಸಿ' | ನೀಲಿ ದೀಪ | ________ |
| ೩. 'ನಿಲ್ಲಿ' | ಹಳದಿ ದೀಪ | ________ |
| | ಹಸಿರು ದೀಪ | ________ |

## ಸಾಮರ್ಥ್ಯ ಆಧಾರಿತ ಅಭ್ಯಾಸ

**ಅ) ಈ ಕೆಳಗಿನ ಬರೆಹವನ್ನು ಓದಿರಿ.**

★ ನಾವು ರಸ್ತೆ ದಾಟುವಾಗ ಎಡ-ಬಲ ನೋಡಬೇಕು.

★ ಪಾದಚಾರಿಗಳು ರಸ್ತೆಯನ್ನು ಝೀಬ್ರಾ ಪಟ್ಟಿಗಳ ಜಾಗದಲ್ಲಿಯೇ ದಾಟಬೇಕು.

★ ರಸ್ತೆಯಲ್ಲಿ ನಡೆಯುವಾಗ ಅವಸರ ಮಾಡಬಾರದು.

★ ರಸ್ತೆಯಲ್ಲಿ ಓಡಾಡುವಾಗ ವಾಹನಗಳ ಸದ್ದಿಗೆ ಪ್ರತಿಕ್ರಿಯೆ ಮಾಡಬೇಕು.

★ ಇನ್ನೊಬ್ಬರನ್ನು ತಳ್ಳಿಕೊಂಡು ನಡೆಯುವುದು, ಓಡುವುದು ಮಾಡಬಾರದು.

**ಆ) ಈ ಕೆಳಗಿನ ಬರೆವಣಿಗೆಯನ್ನು ಓದಿ, ನಂತರ ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿರಿ.**

ವಿಶ್ವದ ಎಲ್ಲ ಜನರಿಗೂ ಅರ್ಥವಾಗುವ ಏಕೈಕ ಭಾಷೆ ಸಂಗೀತ. ಇಂಪಾದ ಶಬ್ದದ ಲಯಬದ್ಧವಾದ ನಿರೂಪಣೆಯನ್ನೇ ಸಂಗೀತ ಎನ್ನಬಹುದು. ಈ ತರಹದ ಇಂಪಾದ ಶಬ್ದವನ್ನು ಮನುಷ್ಯ ತನ್ನ ಧ್ವನಿ ಅಂಗಗಳಿಂದ ಹೊರಡಿಸಿದರೆ ಅದು ಗಾಯನವಾಗುತ್ತದೆ. ಅದೇ ರೀತಿಯ ನಾದವನ್ನು ಹೊರಡಿಸುವ ಶಬ್ದವನ್ನು ಕೊಳಲು, ವೀಣೆ, ತಬಲ ಮುಂತಾದ ಸಂಗೀತ ವಾದ್ಯಗಳಿಂದಲೂ ಹೊರಡಿಸಬಹುದು. ಕೊಳಲನ್ನು ಬಿದಿರಿನಿಂದ ತಯಾರು ಮಾಡುತ್ತಾರೆ. ವಿವಿಧ ಮಾಧುರ್ಯ ಹೊಮ್ಮಿಸುವ ತಂತಿಗಳನ್ನು ಎಳೆದು ಮರದ ಉಪಕರಣಕ್ಕೆ ಕಟ್ಟಿ ವೀಣೆ, ಸಿತಾರ್, ಗಿಟಾರು ಇತ್ಯಾದಿ ತಂತಿವಾದ್ಯಗಳನ್ನು ಮಾಡುತ್ತಾರೆ. ಅದೇ ರೀತಿ ಚರ್ಮವನ್ನು ವಾದ್ಯದ ಬಾಯಿಗೆ ಎಳೆದು ಕಟ್ಟಿ ಮರ್ದನ ವಾದ್ಯಗಳಾದ ತಬಲ, ಮೃದಂಗ, ಢೋಲು, ತಮಟೆ ಮುಂತಾದ ವಾದ್ಯಗಳನ್ನು ಮಾಡುತ್ತಾರೆ.



ಸ ರಿ ಗ ಮ ಪ ದ ನಿ ಎಂಬ ಸಪ್ತ ಸ್ವರಗಳಿಂದ ಸಂಗೀತ ಆಗಿದೆ ಎಂದು ಹೇಳುತ್ತಾರೆ. ಸಂಗೀತವನ್ನು ಆಲಿಸುವುದರಿಂದ ನಮ್ಮ ಮನಸ್ಸಿಗೆ ಸಂತೋಷವಾಗುತ್ತದೆ. ಸಂಗೀತ ಒಂದು ಶ್ರೇಷ್ಠವಾದ ಕಲೆ.

೧. ವಿಶ್ವದ ಎಲ್ಲ ಜನರಿಗೂ ಅರ್ಥವಾಗುವ ಭಾಷೆ ಯಾವುದು?

_______________________________________________

೨. ಸಂಗೀತ ಎಂದರೇನು?

_______________________________________________

೩. ತಂತಿ ವಾದ್ಯಗಳು ಯಾವುವು?

______________________________

೪. ಈ ಗದ್ಯಭಾಗಕ್ಕೆ ಸರಿ ಹೊಂದುವ ಶೀರ್ಷಿಕೆಯನ್ನು ಬರೆಯಿರಿ.

______________________________

## ಚಟುವಟಿಕೆ

**ಅ) ಕೆಳಗೆ ಕಂಸದಲ್ಲಿ ನೀಡಿರುವ ಕ್ರಿಯಾಪದಗಳನ್ನು ಉಪಯೋಗಿಸಿ ವಾಕ್ಯ ರಚನೆ ಮಾಡಿರಿ.**

೧. ಕಿರಣನು ಶಾಲೆಗೆ ________

೨. ಲಕ್ಷ್ಮಿಯು ಹಾಡನ್ನು ________

೩. ಇಲಿಯು ರೊಟ್ಟಿಯನ್ನು ________

(ತಿಂದಳು, ಹೋದಳು, ಹಾಡುವಳು, ತಿಂದನು, ಹೋದನು, ತಿನ್ನುತ್ತದೆ)

**ಆ) ಈ ಫಲಕಗಳು ಏನನ್ನು ಸೂಚಿಸುತ್ತವೆಂದು ನಿಮ್ಮ ಸ್ನೇಹಿತರೊಡನೆ ಚರ್ಚಿಸಿ ಬರೆ.**




______________________________

______________________________



______________________________

______________________________



______________________________

______________________________




______________________________

______________________________

ಇ. ರೈಲು, ಬಸ್ ಪ್ರಯಾಣ ಮಾಡುವಾಗ ಅನುಸರಿಸಬೇಕಾದ ನಿಯಮಗಳಾವುವು?

ಈ. ನೀರು, ಗಾಳಿ ಮತ್ತು ಶಬ್ದಮಾಲಿನ್ಯ ಆಗದಂತೆ ಯಾವ ಕ್ರಮಗಳನ್ನು ತೆಗೆದುಕೊಳ್ಳಬಹುದು ಪಟ್ಟಿಮಾಡಿರಿ.

ಉ. ಈ ಚಿತ್ರವನ್ನು ನೋಡಿ. ಇದಕ್ಕೆ ಸಂಬಂಧಿಸಿದಂತೆ ಹತ್ತು ವಾಕ್ಯಗಳಲ್ಲಿ ಬರೆಯಿರಿ.



## ಪದ್ಯಪಾಠ – ೬

# ಓ ಎನ್ನ ದೇಶ ಬಾಂಧವರೇ

**ಪಾಠಕ್ಕೂ ಮುನ್ನ ..**

ಆಂಗ್ಲರಿಂದ ಸ್ವಾತಂತ್ರ್ಯ ಪಡೆದ ನಂತರವೂ ನಮ್ಮ ಗಡಿಪ್ರದೇಶಗಳಲ್ಲಿ ಧಾಳಿ, ಆಕ್ರಮಣ ಅತಿಕ್ರಮಣ ತಪ್ಪಿಲ್ಲ. ನಮ್ಮ ಭೂ, ಜಲ, ವಾಯುಪಡೆಗಳು ಗಡಿಕಾಯುವ ಪವಿತ್ರಕರ್ತವ್ಯವನ್ನು ನಿರ್ವಹಿಸುತ್ತಿವೆ. "ಜೈಜವಾನ್, ಜೈಕಿಸಾನ್" ಘೋಷಣೆಗಳು ನಮ್ಮ ಸೈನಿಕರ–ರೈತರ ಶ್ರಮ, ತ್ಯಾಗ, ಬಲಿದಾನಗಳ ಸ್ಮರಣೆಯ ನುಡಿಗಳು. ಭಾರತ–ಚೀನಾ ನಡುವಿನ ಯುದ್ಧದ ಸಂದರ್ಭದಲ್ಲಿ ರಚಿತವಾದ ಈ ಕವನ ಗೇಯತೆಯಿಂದ ಕೂಡಿದ್ದು, ಸೈನಿಕರ ತ್ಯಾಗ, ಬಲಿದಾನ ಸದಾ ಸ್ಮರಣಾರ್ಹ ಎಂಬುದನ್ನು ಪ್ರತಿಧ್ವನಿಸುತ್ತದೆ.

ಓ ಎನ್ನ ದೇಶಬಾಂಧವರೇ
ಉದ್ಘೋಷಿಸಿ ನಾಡಿನ ಜಯವ
ಇದೋ ಶುಭದಿನವೂ ನಮಗೆಲ್ಲಾ
ಹಾರಿಸಿ ತ್ರಿವರ್ಣ ಧ್ವಜವ ॥ ೧ ॥

ಅದೋ ಮರೆಯದಿರಿ ಗಡಿಯೆಡೆಯೊಳು
ಯೋಧವರರು ಪ್ರಾಣಾರ್ಪಿತರು
ಇನಿತಾದರೂ ಸ್ಮರಿಸಿ ಅವರ
ಮರಳಿ ಮನೆಗೆ ಬರದವರ ॥ ೨ ॥

ಓ ಎನ್ನ ದೇಶಬಾಂಧವರೇ
ಕಂಬನಿಗಳನೆರಡಾ ಚಿಮ್ಮಿ
ಪ್ರಾಣಾಹುತಿ ನೀಡಿದ ಅವರಾ
ಸಂಸ್ಮರಿಸಿರಿ ಆ ಬಲಿದಾನ ॥ ೩ ॥

ನೀವವರನು ಮರೆಯಲು ಬರದು
ಅದಕಾಗಿ ಇದೋ ಈ ಕಥನ
ಪ್ರಾಣಾಹುತಿ ನೀಡಿದ ಅವರ
ಸಂಸ್ಮರಿಸಿರಿ ಆ ಬಲಿದಾನ ॥ ೪ ॥



ಹಿಮಗಿರಿಯು ಗಾಯಗೊಂಡಿರಲು
ಸ್ವಾತಂತ್ರ್ಯಕೆ ಬಂತೋ ಎಡರು
ಉಸಿರಿರುವರೆ ಕಾದುತ ಅವರು
ತಮ್ಮಯ ಹೆಣ ತಾವ್ ಹಾಸಿದರು ॥ ೫ ॥

ಶಿಲೆ ಎದೆಯನು ತಪ್ಪಿರೆ ಮೊಗವು
ಚಿರನಿದ್ರಿತ ಅಮರರು ಅವರು
ಪ್ರಾಣಾಹುತಿ ನೀಡಿದ ಅವರ
ಸಂಸ್ಮರಿಸಿರಿ ಆ ಬಲಿದಾನ ॥ ೬ ॥

ಇವ ಸಿಖ, ಇವ ಜಾಠ, ಮರಾಠ
ಇವ ಗೂರ್ಖ, ಮೇಣ್ ಮದರಾಸಿ
ಗಡಿಯೆಡೆಯೊಳು ಮಡಿವವರೆಲ್ಲ
ಬಲವಾನಿ ಭಾರತವಾಸಿ ॥ ೭ ॥

ಹಿಮಗಿರಿಯೆಡೆ ಸುರಿದಿಹ ರಕ್ತ
ಅದು ನಮ್ಮೀ ಭಾರತ ರಕ್ತ!
ಪ್ರಾಣಾಹುತಿ ನೀಡಿದ ಅವರ
ಸಂಸ್ಮರಿಸಿರಿ ಆ ಬಲಿದಾನ ॥ ೮ ॥

ನೆತ್ತರದಿ ಕೆಡೆದರೂ ಕೂಡಾ
ಕೋವಿಯನೆತ್ತಿದರೀ ನಖರಾ
ಕರೆಯಿತು ಹತ್ತಾರು ಶಿರಗಳ
ಕೊನೆಯಲಿ ಸ್ಮೃತಿ ತಪ್ಪುತ ಉರುಳೇ ॥ ೯ ॥

ಅಂತ್ಯ ಸಮಯತಾ ಬಂತು
ನಡೆದರು ನುಡಿಯುತಲಿ ಇಂತು
ಸುಖಿಯಾಗಿರಿ ಪ್ರಿಯ ಬಾಂಧವರೇ
ಮರಳದ ಪಯಣವು ಇನ್ನೆಮಗೆ ॥ ೧೦ ॥

ಏನೆಂಥ ಮರುಳರೋ ಅವರು
ಉಜ್ವಲ ಅಭಿಮಾನದ ಸೊಡರು
ಪ್ರಾಣಾಹುತಿ ನೀಡಿದ ಅವರ
ಸಂಸ್ಮರಿಸಿರಿ ಆ ಬಲಿದಾನ ॥ ೧೧ ॥

ನೀವವರನು ಮರೆಯಲು ಬರದು
ಅದಕಾಗಿ ಇದೋ ಈ ಕಥನ
ಪ್ರಾಣಾಹುತಿ ನೀಡಿದ ಅವರ
ಸಂಸ್ಮರಿಸಿರಿ ಆ ಬಲಿದಾನ
ಜೈಹಿಂದ್ ಜೈಹಿಂದ್ ॥ ೧೨ ॥

**ಹಿಂದಿ : ಪ್ರದೀಪ್**

**ಕನ್ನಡಕ್ಕೆ ಅನುವಾದ : ರಾಘವೇಂದ್ರ ಇಟಗಿ**



**ಕ್ಷೇತ್ರ :** ಓದುವುದು

**ಸಾಮರ್ಥ್ಯ :** ಪದ್ಯವನ್ನು ಓದಿದ ಬಳಿಕ ಯಾರು? ಎಲ್ಲಿ? ಏನು? ಏಕೆ? ಪ್ರಶ್ನೆಗಳಿಗೆ ಉತ್ತರಿಸುವುದು.

**ಆಶಯ :** ದೇಶಸೇವೆಗೆ ಎಂತಹ ತ್ಯಾಗ, ಬಲಿದಾನಗಳಿಗೂ ಸಿದ್ಧರಾಗಿರಬೇಕು ಎಂಬ ಅಮರ ಸಂದೇಶ ಈ ಕವನದ ಆಶಯ.

## ಕವಿ ಕೃತಿ ಪರಿಚಯ



ರಾಮಚಂದ್ರ ಬರ್ಯಾನ್ಜಿ ದ್ವಿವೇದಿ ಎಂಬ ಮೂಲ ಹೆಸರಿನ ಕವಿ **ಪ್ರದೀಪ್** ರವರು ಹಿಂದಿ ಭಾಷೆಯ ಉತ್ತಮ ಕವಿಗಳಲ್ಲಿ ಒಬ್ಬರು. ಇವರು 1915ರಲ್ಲಿ ಮಧ್ಯಪ್ರದೇಶದ ಉಜ್ಜಯಿನಿ ಸಮೀಪದ ಬಡ್ನಾಗರ್ ಎಂಬಲ್ಲಿ ಜನಿಸಿದರು. ಅನೇಕ ದೇಶಭಕ್ತಿ ಗೀತೆಗಳನ್ನು ರಚಿಸಿರುವ ಇವರ 'ಏ ಮೇರೆ ವತನ್ ಕೆ ಲೋಗೋ' ಎಂಬ ಗೀತೆಯನ್ನು ಭಾರತ ಹಾಗೂ ಚೀನಾ ನಡುವಿನ ಯುದ್ಧದ ಸಂದರ್ಭವನ್ನು ಕುರಿತು ಬರೆದಿದ್ದು, ಅದು ತುಂಬಾ ಜನಪ್ರಿಯತೆಯನ್ನು ಪಡೆದುಕೊಂಡಿತು. 1997ರಲ್ಲಿ ಇವರಿಗೆ ಪ್ರತಿಷ್ಠಿತ ದಾದಾ ಸಾಹೇಬ್ ಫಾಲ್ಕೆ ಪ್ರಶಸ್ತಿ ಲಭಿಸಿತು.

## ಅನುವಾದಕರ ಪರಿಚಯ



ಕನ್ನಡದ ನವಪೀಳಿಗೆಯ ಲೇಖಕರಾದ **ಇಟಗಿ ರಾಘವೇಂದ್ರ** ಅವರು ೧೯೨೬ರಲ್ಲಿ ಗದಗ ಜಿಲ್ಲೆ ರೋಣ ತಾಲ್ಲೂಕು ಇಟಗಿಯಲ್ಲಿ ಜನಿಸಿದರು. ಮೈಸೂರು, ಬೆಂಗಳೂರು, ಧಾರವಾಡ, ಗುಲಬರ್ಗಾ ಆಕಾಶವಾಣಿಯಲ್ಲಿ ಕೆಲಸ ನಿರ್ವಹಿಸಿದ್ದಲ್ಲದೇ ಹೈದರಾಬಾದ್, ಪಣಜಿ ಹಾಗೂ ಶ್ರೀನಗರ ಆಕಾಶವಾಣಿಗಳಲ್ಲೂ ಕೆಲಸ ಮಾಡಿ ಕನ್ನಡದ ಕಂಪನ್ನು ಬೀರುವಲ್ಲಿ ಯಶಸ್ವಿಯಾದವರು. 'ವಸುಂಧರಾ ಗೀತಗಳು' ಎಂಬ ಮಕ್ಕಳ ಕವನ ಸಂಕಲನವನ್ನೂ, 'ಕ್ಷಿತಿಜ ಕೋದಂಡ', 'ಬೆಳಕು ತುಂಬಿದ ಬಲ್ಬು' ಎಂಬ ಕವನ ಸಂಕಲನಗಳನ್ನು ಬರೆದಿದ್ದಾರೆ. 'ಬಿಳಿಯ ಗಡ್ಡ ಕೆಂಪಾಯಿತು', 'ವಾಲ್ಮೀಕಿ' ಮುಂತಾದವು ಇವರ ಪ್ರಮುಖ ನಾಟಕಗಳು.

## ಓದಿ ತಿಳಿಯಿರಿ

ಉದ್ಘೋಷಿಸು – ಗಟ್ಟಿಯಾಗಿ, ಕೂಗಿಹೇಳು; ಇನಿತಾದರೂ – ಸ್ವಲ್ಪವಾದರೂ; ಸಂಸ್ಮರಿಸು – ನೆನಪಿಸಿಕೋ; ಬಲಿದಾನ – ತನ್ನನ್ನೇ ಆಹುತಿ ಕೊಡುವುದು, ಬಲಿಕೊಡುವಿಕೆ; ಎಡರು – ತೊಂದರೆ; ಚಿರನಿದ್ರೆ – ಶಾಶ್ವತವಾದ ನಿದ್ರೆ, ಸಾವು; ಕೋವಿ – ಬಂದೂಕು; ಶಿರ – ತಲೆ; ಸ್ಮೃತಿ – ನೆನಪು, ಸ್ಮರಣೆ; ಉಜ್ವಲ – ಪ್ರಕಾಶಮಾನವಾದ; ಅಭಿಮಾನ – ಆತ್ಮಗೌರವ



## ಅಭ್ಯಾಸ

**ಅ) ಬಿಟ್ಟಿರುವ ಖಾಲಿ ಜಾಗಗಳನ್ನು ಸೂಕ್ತವಾದ ಪದಗಳಿಂದ ಭರ್ತಿ ಮಾಡಿರಿ.**

೧. ಓ ಎನ್ನ ದೇಶ ಬಾಂಧವರೇ __________ ನಾಡಿನ ಜಯವ

೨. ಇದೋ ಶುಭದಿನವೂ ನಮಗೆಲ್ಲಾ ಹಾರಿಸಿ __________ ಧ್ವಜವ

೩. ನೀವವರನು __________ ಬಾರದು

೪. ಪ್ರಾಣಾಹುತಿ ನೀಡಿದ ಅವರಾ __________ ಆ ಬಲಿದಾನ

**ಆ) ಈ ಪದ್ಯದ ಸಾಲುಗಳನ್ನು ಸರಿಯಾಗಿ ಹೊಂದಿಸಿರಿ.**

| "ಅ" | "ಬ" |
|---|---|
| 1. ಹಿಮಗಿರಿಯೆಡೆ ಸುರಿದಿಹ ರಕ್ತ | ಅ. ಉಜ್ವಲ ಅಭಿಮಾನದ ಸೊಡರು |
| 2. ಶಿಲೆ ಎದೆಯನು ತಪ್ಪಿರೆ ಮೊಗವು | ಆ. ನಡೆದರು ನುಡಿಯುತಲಿ ಇಂತು |
| 3. ಅಂತ್ಯ ಸಮಯತಾ ಬಂತು | ಇ. ಸಂಸ್ಮರಿಸಿ ಆ ಬಲಿದಾನ |
| 4. ಏನೆಂಥ ಮರುಳರೋ ಅವರು | ಈ. ಚಿರನಿದ್ರಿತ ಅಮರರು ಅವರು |
| | ಉ. ಅದು ನಮ್ಮೀ ಭಾರತ ರಕ್ತ! |

**ಇ) ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಶುಭದಿನದಂದು ಏನು ಮಾಡಬೇಕೆಂದು ಹೇಳಲಾಗಿದೆ?

_______________________________________________

೨. ಯಾರ ಬಲಿದಾನವನ್ನು ಸಂಸ್ಮರಿಸಬೇಕೆಂದು ಕವಿ ಹೇಳಿದ್ದಾರೆ?

_______________________________________________

೩. ಯೋಧರು ಅಂತ್ಯ ಸಮಯದಲಿ ಏನೆಂದು ಹೇಳುತ್ತಾರೆ?

_______________________________________________

೪. ಕವಿ ಯಾವ ಸಂದರ್ಭದಲ್ಲಿ ಈ ಗೀತೆಯನ್ನು ರಚಿಸಿದ್ದಾರೆ?

_______________________________________________

**ಈ) ಈ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಮರಳಿ ಮನೆಗೆ ಬರದವರು ಯಾರು? ಏಕೆ?

_______________________________________________

_______________________________________________

೨. ಈ ಪದ್ಯದ ಯಾವ ಸಾಲುಗಳು ನಿನಗೆ ಇಷ್ಟವಾಯಿತು?

_______________________________________________

_______________________________________________



**ಈ) ಈ ಪದ್ಯದಲ್ಲಿರುವ ಪ್ರಾಸ ಪದಗಳನ್ನು ಗುರುತಿಸಿ ಬರೆಯಿರಿ.**

**ಉ) ಶಿಕ್ಷಕರ ನೆರವಿನಿಂದ ಈ ಪದ್ಯದ ಭಾವಾರ್ಥವನ್ನು ಬರೆಯಿರಿ.**

## ಸಾಮರ್ಥ್ಯ ಆಧಾರಿತ ಅಭ್ಯಾಸ

**ಅ) ಈ ಪಠ್ಯಭಾಗವನ್ನು ಓದಿ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

ಒಮ್ಮೆ ಈಶ್ವರಚಂದ್ರ ವಿದ್ಯಾಸಾಗರರಿಗೆ ಪರಿಚಿತರೊಬ್ಬರಿಂದ ಮನೆಯ ಔತಣಕೂಟಕ್ಕೆ ಆಹ್ವಾನ ಬಂದಿತ್ತು. ಈಶ್ವರಚಂದ್ರ ಅವರು ಬಂಗಾಳದ ಜನಪ್ರಿಯ ವ್ಯಕ್ತಿಗಳಾಗಿದ್ದರು ಹಾಗೂ ಪ್ರತಿಷ್ಠಿತ ಕಾಲೇಜಿನ ಪ್ರಾಂಶುಪಾಲರಾಗಿ ಕರ್ತವ್ಯ ನಿರ್ವಹಿಸಿದ್ದರು. ಆದರೂ ಅವರು ಸರಳವಾಗಿದ್ದರು.

ಔತಣಕೂಟಕ್ಕೆ ಈಶ್ವರಚಂದ್ರ ಅವರು ಹೋದಾಗ ಆ ಮನೆಯ ಕಾವಲುಗಾರ ಅವರನ್ನು ಒಳಗೆ ಬಿಡಲಿಲ್ಲ. ಅವರು ಅತಿ ಸರಳ ಉಡುಪಿನಲ್ಲಿ ಹೋಗಿದ್ದರು. ಔತಣ ಕೂಟಕ್ಕೆ ಕರೆದ ವ್ಯಕ್ತಿ ತುಂಬಾ ಶ್ರೀಮಂತನಾಗಿದ್ದ. ಅಲ್ಲಿ ಬರುತ್ತಿದ್ದವರೆಲ್ಲ ಶ್ರೀಮಂತ ಉಡುಪಿನಲ್ಲಿದ್ದರು. ಅಂತಹವರನ್ನು ಮಾತ್ರ ಆತ ಒಳಗೆ ಬಿಡುತ್ತಿದ್ದ.

ಈಶ್ವರ ಚಂದ್ರರು ಮನೆಗೆ ವಾಪಸ್ಸು ಬಂದರು. ಸೂಟು ಬೂಟು ಟೈ ಇತ್ಯಾದಿ ಧರಿಸಿ ಮತ್ತೆ ಔತಣ ಕೂಟಕ್ಕೆ ಹೋದರು. ಈ ಬಾರಿ ಕಾವಲುಗಾರ ಅವರನ್ನು ಸುಲಭವಾಗಿ ಒಳಗೆ ಬಿಟ್ಟ. ಔತಣ ಕೂಟದಲ್ಲಿ ಈಶ್ವರಚಂದ್ರರು ಎಲ್ಲರ ಜೊತೆ ಊಟಕ್ಕೆ ಕೂತಾಗ ಊಟವನ್ನು ತಮ್ಮ ಸೂಟಿಗೆ ಟೈಗೆ ತಿನ್ನಿಸತೊಡಗಿದರು. ಅಲ್ಲಿದ್ದ ಎಲ್ಲ ಜನರೂ ಅಚ್ಚರಿಯಲ್ಲಿ ಅವರೆಡೆ ನೋಡತೊಡಗಿದರು.

ಔತಣ ಕೂಟ ಏರ್ಪಡಿಸಿದ್ದ ವ್ಯಕ್ತಿ ಈಶ್ವರಚಂದ್ರ ಅವರ ಹತ್ತಿರ ಬಂದು ಅವರ ಈ ನಡವಳಿಕೆಗೆ ಕಾರಣ ಕೇಳಿದ.

ಈಶ್ವರಚಂದ್ರರು ನಡೆದದ್ದನ್ನೆಲ್ಲ ಹೇಳಿದರು. ಆ ವ್ಯಕ್ತಿ ಕಾವಲು ಗಾರನನ್ನು ಕರೆಯಿಸಿ ಕ್ಷಮೆ ಕೇಳುವಂತೆ ಹೇಳಿದ. ತನ್ನ ತಪ್ಪೂ ಇದೆಯೆಂದು ಅವರ ಬಳಿ ಕ್ಷಮೆ ಕೇಳಿದ.



**ಈ ಪ್ರಶ್ನೆಗಳಿಗೆ ಉತ್ತರಿಸಿ.**

೧. ಈಶ್ವರಚಂದ್ರ ವಿದ್ಯಾಸಾಗರ್ ಯಾರು?

೨. ಔತಣಕೂಟಕ್ಕೆ ಯಾರನ್ನು ಮಾತ್ರ ಒಳ ಬಿಡಲಾಗುತ್ತಿತ್ತು?

೩. ಎರಡನೆ ಬಾರಿ ಔತಣ ಕೂಟಕ್ಕೆ ಹೋದಾಗ ಯಾವ ಉಡುಗೆ ತೊಟ್ಟು ಹೋಗಿದ್ದರು?

೪. ಪರಿಚಿತರು ವಿದ್ಯಾಸಾಗರರ ಬಳಿ ಕ್ಷಮೆ ಕೇಳಲು ಕಾರಣವೇನು?

## ಭಾಷಾ ಹಾಗೂ ಅಭ್ಯಾಸ ಚಟುವಟಿಕೆ

**ಅ) ಈ ಪದ್ಯ ಭಾಗವನ್ನು ಗದ್ಯ ರೂಪದಲ್ಲಿ ಬರೆಯಿರಿ.**

ಓ ಎನ್ನ ದೇಶಬಾಂಧವರೇ

ಉದ್ಘೋಷಿಸಿ ನಾಡಿನ ಜಯವ

ಇದೋ ಶುಭದಿನವೂ ನಮಗೆಲ್ಲಾ

ಹಾರಿಸಿ ತ್ರಿವರ್ಣ ಧ್ವಜವ

ಅದೋ ಮರೆಯದಿರಿ ಗಡಿಯೆಡೆಯೊಳು
ಯೋಧವರರು ಪ್ರಾಣಾರ್ಪಿತರು
ಇನಿತಾದರೂ ಸ್ಮರಿಸಿ ಅವರ
ಮರಳಿ ಮನೆಗೆ ಬರದವರ

ಓ ಎನ್ನ ದೇಶಬಾಂಧವರೇ
ಕಂಬನಿಗಳನೆರಡಾ ಚಿಮ್ಮಿ
ಪ್ರಾಣಾಹುತಿ ನೀಡಿದ ಅವರಾ
ಸಂಸ್ಮರಿಸಿರಿ ಆ ಬಲಿದಾನ

**ಇ) ಈ ದೇಶಭಕ್ತಿ ಗೀತೆಗಳನ್ನು ಸಂಗ್ರಹಿಸಿ, ಕಲಿತು ತರಗತಿಯಲ್ಲಿ ಹಾಡಿರಿ.**

* ಹಿಮಗಿರಿಯ ಶೃಂಗಾ ದೇವನದಿ ಗಂಗಾ
* ಧವಳ ಹಿಮದ ಗಿರಿಯ ಮೇಲೆ ಅರುಣ ಧ್ವಜವ ಹಾರಿಸಿ
* ವಿಶ್ವ ವಿನೂತನ ವಿದ್ಯಾ ಚೇತನ
* ನನ್ನ ದೇಶ ನನ್ನ ಜನ

**ಈ) ಈ ಗೀತೆಗಳನ್ನು ಸಾಮೂಹಿಕವಾಗಿ ರಾಗಬದ್ಧವಾಗಿ ಹಾಡಿರಿ.**





# ನಮ್ಮ ರಾಷ್ಟ್ರಧ್ವಜ



ನಮ್ಮ ದೇಶದ ರಾಷ್ಟ್ರಧ್ವಜವು ನೋಡಲು ಆಕರ್ಷಕವಾಗಿದೆ. ಕೇಸರಿ, ಬಿಳಿ ಹಾಗೂ ಹಸಿರು ಬಣ್ಣಗಳ ಮೂರು ಪಟ್ಟಿಗಳನ್ನು ಹೊಂದಿದೆ. ಮಧ್ಯದ ಬಿಳಿ ಪಟ್ಟಿಯಲ್ಲಿ ನೀಲಿ ಬಣ್ಣದ ಚಕ್ರ ಇದ್ದು, ಅದಕ್ಕೆ ೨೪ ಅರಗಳು ಇವೆ. ಹಾಗಾಗಿ ಭಾರತದ ರಾಷ್ಟ್ರಧ್ವಜವನ್ನು ತ್ರಿವರ್ಣ ಧ್ವಜವೆಂದು ಕರೆಯುತ್ತಾರೆ. ಮೇಲೆ ಕೇಸರಿ, ಮಧ್ಯದಲ್ಲಿ ಬಿಳಿ ಹಾಗೂ ಕೆಳಗೆ ಹಸಿರು ಬಣ್ಣದ ಪಟ್ಟಿಗಳಿವೆ. ನಮ್ಮ ರಾಷ್ಟ್ರಧ್ವಜ ಆಯತಾಕಾರದಲ್ಲಿದೆ. ಇದರ ಉದ್ದ, ಅಗಲ ೩ : ೨ ಅನುಪಾತದಲ್ಲಿರುತ್ತದೆ. ನಮ್ಮ ದೇಶದ ರಾಷ್ಟ್ರಧ್ವಜವನ್ನು ಖಾದಿ ಬಟ್ಟೆಯಲ್ಲಿಯೇ ತಯಾರಿಸಲಾಗುತ್ತದೆ.

**ಕೇಸರಿ** ಬಣ್ಣವು ತ್ಯಾಗ, ಶ್ರಮ, ಬಲಿದಾನದ ಸಂಕೇತವಾಗಿದ್ದರೆ, **ಬಿಳಿ** ಬಣ್ಣವು ಶಾಂತಿಯನ್ನು ಪ್ರತಿನಿಧಿಸುತ್ತದೆ. **ಹಸಿರು** ಬಣ್ಣವು ಸಮೃದ್ಧತೆಯನ್ನು ವ್ಯಕ್ತಪಡಿಸಿದರೆ, **ಮಧ್ಯದ ನೀಲಿ ಬಣ್ಣದ ಚಕ್ರವು** ಪ್ರಗತಿಯ ಸಂಕೇತವಾಗಿದೆ. ಅದರಲ್ಲಿನ ೨೪ ಅರಗಳು ದಿನದ ೨೪ ಗಂಟೆಗಳೂ ನಾವು ಕ್ರಿಯಾಶೀಲರಾಗಿರಲು ಸೂಚಿಸುತ್ತದೆ. ಚಕ್ರವನ್ನು ಸಾರನಾಥದಲ್ಲಿರುವ ಅಶೋಕನ ಸ್ತಂಭದ ಲಾಂಛನದಿಂದ ತೆಗೆದುಕೊಳ್ಳಲಾಗಿದೆ.



ನಮ್ಮ ದೇಶದ ರಾಷ್ಟ್ರಧ್ವಜದ ಕಲ್ಪನೆ ಸ್ವಾತಂತ್ರ್ಯಕ್ಕಿಂತಲೂ ಬಹಳ ವರ್ಷಗಳ ಹಿಂದಿನಿಂದಲೇ ಪ್ರಾರಂಭವಾಗಿದ್ದು, ಕಾಲ ಕ್ರಮೇಣ ಅನೇಕ ಬದಲಾವಣೆಗಳೊಂದಿಗೆ ಇಂದಿನ ಧ್ವಜ ರೂಪುಗೊಂಡಿದೆ.

### ಈ ಪ್ರಶ್ನೆಗಳಿಗೆ ಉತ್ತರಿಸಿರಿ.

೧. ನಮ್ಮ ರಾಷ್ಟ್ರಧ್ವಜದ ಮೂರು ಬಣ್ಣಗಳು ಯಾವುವು?

೨. ಧ್ವಜದ ಮಧ್ಯಭಾಗದಲ್ಲಿರುವ ಚಕ್ರದಲ್ಲಿ ಎಷ್ಟು ಅರಗಳಿವೆ?

೩. ಮೂರು ಬಣ್ಣಗಳು ಏನನ್ನು ಪ್ರತಿನಿಧಿಸುತ್ತವೆ?

೪. ಚಕ್ರ ಯಾವುದರ ಸಂಕೇತವಾಗಿದೆ?

# ಗದ್ಯಪಾಠ – ೭

# ಶಾಲಾ ವಾರ್ಷಿಕೋತ್ಸವ

**ಪಾಠಕ್ಕೂ ಮುನ್ನ ..**

ನಿಮ್ಮ ಶಾಲೆಯಲ್ಲಿ ವಾರ್ಷಿಕೋತ್ಸವವನ್ನು ಆಚರಿಸಿರುತ್ತೀರಲ್ಲವೇ? ಅದಕ್ಕೆ ನಿಮ್ಮ ಶಾಲೆಯನ್ನು ಸಜ್ಜುಗೊಳಿಸಲು ಶಿಕ್ಷಕರು ನಿಮಗೆ ಯಾವ ಯಾವ ಸೂಚನೆಗಳನ್ನು ನೀಡುತ್ತಾರೆ? ನೀವು ಹೇಗೆ ಅವುಗಳನ್ನು ಅನುಸರಿಸುತ್ತೀರಿ?

ನಿಮ್ಮ ಶಿಕ್ಷಕರ ಮಾರ್ಗದರ್ಶನದಲ್ಲಿ ಆ ತರಹ ಒಂದು ಅಣಕು ಕಾರ್ಯಕ್ರಮ ಮಾಡಿ.









ಹೂವನ್ನು ಕೀಳಬೇಡಿ


ಹುಲ್ಲು ಹಾಸಿನ ಮೇಲೆ
ನಡೆಯ ಬಾರದು
ಈ ಫಲಕವನ್ನು ಓದು




ಸಾಲಾಗಿ ಬನ್ನಿ
ಎಯ್ ! ನುಗ್ಗ ಬೇಡ ! ಸಾಲಾಗಿ ಬಾ,
ಅಲ್ಲಿ ನೋಡು ಆ ಸೂಚನಾ ಫಲಕವನ್ನು


ಶಾಲಾ ವಾರ್ಷಿಕೋತ್ಸವ
ಗಲಾಟೆ ಮಾಡಬಾರದು
ಲಕ್ಷ್ಮೀ ಸದ್ದು ಮಾಡಬಾರದು,
ಅಲ್ಲಿ ನೋಡು 'ಗಲಾಟೆ ಮಾಡಬಾರದು' ಅಂತಾ ಬರೆದಿದೆ.


ಕಸವನ್ನು ಕಸದ ತೊಟ್ಟಿಯಲ್ಲೇ ಹಾಕಿ
ಕಸದ ತೊಟ್ಟಿ
ಈ ಸೂಚನಾಫಲಕಗಳನ್ನು ನಾನು ಇಷ್ಟು ದಿವಸ ಗಮನಿಸಿಯೇ ಇರಲಿಲ್ಲ ಅಣ್ಣಾ :
ಹೌದೆ ? ಸೂಚನಾಫಲಕಗಳು ಆಯಾ ಸ್ಥಳಗಳಲ್ಲಿ ನಾವು ನಡೆದುಕೊಳ್ಳಬೇಕಾದ ರೀತಿಯನ್ನು ಸೂಚಿಸುತ್ತವೆ.




ಕುಡಿಯುವ ನೀರು
ನೀರನ್ನು ಮಿತವಾಗಿ ಬಳಸಿ
ಅಂತೆಯೇ ಅಲ್ಲಿ ನೋಡು, ನೀನು ಕೈ ತೊಳೆದುನಲ್ಲಿ ನಿಲ್ಲಿಸದೇ ಬಂದಿದ್ದೀಯ.
ನೀರನ್ನು ಮಿತವಾಗಿ ಬಳಸಿ ಎನ್ನುವ ಸೂಚನೆ ಗಮನಿಸು.












ವಾರ್ಷಿಕೋತ್ಸವಸಮಾರಂಭದ ನಂತರ ಶಾಲೆಯಿಂದ ವಿತರಿಸಲಾದ ಉಪಹಾರವನ್ನು ಸೇವಿಸಿ ಲಕ್ಷ್ಮಿಯು ತನ್ನ ಅಣ್ಣನೊಂದಿಗೆ ಮನೆಗೆ ಹಿಂತಿರುಗಿದಳು.

**ಕ್ಷೇತ್ರ :** ಓದುವುದು
**ಸಾಮರ್ಥ್ಯ :** ಸೂಚನಾಫಲಕಗಳಲ್ಲಿನ ಸರಳ ಸೂಚನೆ ಮತ್ತು ಭಿತ್ತಿಪತ್ರಗಳನ್ನು ಓದುವುದು

## ಓದಿ ತಿಳಿ

ವಾರ್ಷಿಕೋತ್ಸವ – ವರ್ಷಕ್ಕೊಮ್ಮೆ ಆಚರಿಸುವ ಉತ್ಸವ; ನುಗ್ಗು – ನುಸುಳು; ಸದ್ದು – ಗಲಾಟೆ, ಗದ್ದಲ; ಮಿತ – ಎಲ್ಲೆಮೀರದ, ಫಲಕ – ಸೂಚನಾ ಹಲಗೆ.

## ಗಮನಿಸಿ ತಿಳಿ

ಸೂಚನಾಫಲಕ – ಯಾವುದೇ ಕೆಲಸ ನಿರ್ವಹಿಸಲು, ನಿಯಮ ಪಾಲಿಸಲು ಆಯಾ ಸ್ಥಳಗಳಲ್ಲಿ ಸೂಚನೆಗಳನ್ನೊಳಗೊಂಡಿರುವ ಫಲಕಗಳು. ಭಿತ್ತಿ ಚಿತ್ರ – ಗೋಡೆ ಮೇಲೆ ಅಂಟಿಸಿರುವ ಮಾಹಿತಿ ಪತ್ರ.

## ಅಭ್ಯಾಸ

**ಅ. ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ.**

೧. ಯಾರ ಶಾಲೆಯಲ್ಲಿ ವಾರ್ಷಿಕೋತ್ಸವ ಏರ್ಪಡಿಸಿದ್ದರು?

______________________________

೨. ವಾರ್ಷಿಕೋತ್ಸವಕ್ಕೆ ಅಣ್ಣನೊಂದಿಗೆ ಬಂದಿದ್ದವರು ಯಾರು?

______________________________

೩. ಕಸದ ತೊಟ್ಟಿಯ ಬಳಿಯಲ್ಲಿದ್ದ ಸೂಚನಾಫಲಕದಲ್ಲಿ ಏನೆಂದು ಬರೆದಿತ್ತು?

______________________________

೪. ಶೌಚಾಲಯದ ಮುಂದೆ ಹಾಕಿದ್ದ ಸೂಚನಾಫಲಕ ಏನೆಂದು ಸೂಚಿಸುತ್ತಿತ್ತು?

______________________________

೫. ಕುಡಿಯುವ ನೀರಿನ ಬಳಿ ಇದ್ದ ಫಲಕದಲ್ಲಿ ಏನೆಂದು ಬರೆದಿತ್ತು?

______________________________

ಆ ಖಾಲಿ ಬಿಟ್ಟ ಸ್ಥಳಗಳನ್ನು ನಾಲ್ಕು ಪರ್ಯಾಯ ಉತ್ತರಗಳಲ್ಲಿ ಸೂಕ್ತ ಉತ್ತರದಿಂದ ಹುಡುಕಿ ಬರೆಯಿರಿ.

೧. ನೀರನ್ನು ______________ ಬಳಸಿ.

ಅ. ಮಿತವಾಗಿ ಆ. ಹಿತವಾಗಿ ಇ. ಹೆಚ್ಚಾಗಿ ಈ. ಇಷ್ಟಬಂದಂತೆ

೨. ಹೂವನ್ನು ______________

ಅ. ಕಿತ್ತುಬಿಡಿ ಆ. ನೋಡಬೇಡಿ ಇ. ಕೀಳಬೇಡಿ ಈ. ಬಿಸಾಕಬೇಡಿ

ಇ. ಈ ಕೆಳಗಿನ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಬಳಸಿ ಬರೆಯಿರಿ.

೧. ಗಲಾಟೆ ಮಾಡು
೨. ನುಗ್ಗು
೩. ಮಿತವಾಗಿ ಬಳಸು
೪. ಸ್ವಚ್ಛವಾಗಿಟ್ಟುಕೊ

ಈ. ಈ ಗಾದೆಮಾತುಗಳಿಗೆ ಅವುಗಳ ಅರ್ಥದೊಂದಿಗೆ ಹೊಂದಿಸಿರಿ.

| | |
|---|---|
| ೧. ಅಂಬಲಿ ಕುಡಿದರೂ ಇಂಬಾಗಿ ಕುಡಿ | ಅ. ತಿಳಿದೂ ಅಡ್ಡದಾರಿ ಹಿಡಿಯುವುದು |
| ೨. ಇರುಳು ಕಂಡ ಬಾವಿಯಲ್ಲಿ ಹಗಲು ಬಿದ್ದಂತೆ | ಆ. ಉಪಕಾರವನ್ನು ಸದಾ ಸ್ಮರಿಸು |
| ೩. ಎಲ್ಲರ ಮನೆ ದೋಸೆಯೂ ತೂತು | ಇ. ಇದ್ದುದನ್ನೇ ತೃಪ್ತಿಯಿಂದ ಅನುಭವಿಸು |
| | ಈ. ಕೊರತೆಗಳು ಎಲ್ಲರಿಗೂ ಸಾಮಾನ್ಯ |



ಉ. ಈ ಭಿತ್ತಿ ಪತ್ರವನ್ನು ಓದಿ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಚಿತ್ತಾರ, ಹುಬ್ಬಳ್ಳಿ.
ಶಾಲಾ ವಾರ್ಷಿಕೋತ್ಸವ ಕಾರ್ಯಕ್ರಮ
ದಿನಾಂಕ : ೩ನೆಯ ಮಾರ್ಚ್ ೨೦೧೪
ಸ್ಥಳ : ಸರ್ಕಾರಿ ಹಿರಿಯ ಪ್ರಾಥಮಿಕ ಶಾಲಾ ಮೈದಾನ.
ಸುಸ್ವಾಗತ

೧. ಭಿತ್ತಿ ಪತ್ರದಲ್ಲಿರುವ ಮುಖ್ಯ ವಿಷಯ ಯಾವುದು?

೨. ಯಾವ ಕಾರಣಕ್ಕೆ ಭಿತ್ತಿ ಪತ್ರ ಅಂಟಿಸಿದ್ದಾರೆ?

೩. ಯಾವ ದಿನಾಂಕದಂದು ಕಾರ್ಯಕ್ರಮ ಜರುಗಲಿದೆ?

೪. ಯಾವ ಸ್ಥಳದಲ್ಲಿ ಕಾರ್ಯಕ್ರಮ ನಡೆಯುತ್ತದೆ?

**ಊ. ದಿನನಿತ್ಯ ನೀವು ಕಾಣುವ ಸೂಚನಾಫಲಕಗಳನ್ನು ಓದಿ ಪಟ್ಟಿ ಮಾಡಿರಿ.**

೧. ______________ ೨. ______________

೩. ______________ ೪. ______________

## ಭಾಷಾಭ್ಯಾಸ

**ಅ. ಇವುಗಳನ್ನು ಕೂಡಿಸಿ ಬರೆಯಿರಿ:**

**ಮಾದರಿ: ಮಹ + ಆಲಯ = ಮಹಾಲಯ**

೧. ಮೃಗ + ಆಲಯ = __________

೨. ದೇವ + ಆಲಯ = __________

೩. ಶಾಲೆ + ಇಂದ = __________

೪. ಮನೆ + ಅನ್ನು = __________

೫. ಊರು + ಊರು = __________



**ಆ. ಮಾದರಿಯಲ್ಲಿ ಸೂಚಿಸಿರುವಂತೆ ವಿವರಣೆಗಳಿಗೆ ಹೊಂದುವ ಪದ ಬರೆಯಿರಿ.**

**ಮಾದರಿ :** ದನಗಳನ್ನು ಕಟ್ಟುವ ಸ್ಥಳ – ಕೊಟ್ಟಿಗೆ

೧. ವಿದ್ಯಾರ್ಥಿಗಳು ಕಲಿಯಲು ಸೇರುವ ನಿಗದಿತ ಸ್ಥಳ – ______________

೨. ಪುಸ್ತಕಗಳನ್ನು ಸಂಗ್ರಹಿಸಿ ಇಟ್ಟಿರುವ ಸ್ಥಳ – ______________

೩. ವನ್ಯಜೀವಿಗಳನ್ನು ಸಂರಕ್ಷಿಸಿ ಇಟ್ಟಿರುವ ಪ್ರದೇಶ – ______________

## ಯೋಜನೆ – ನಿಯೋಜಿತ ಕಾರ್ಯ

೧. ನಿಮ್ಮ ಶಾಲೆಯಲ್ಲಿ ನಡೆಯುವ ಸ್ವಾತಂತ್ರ್ಯೋತ್ಸವ ಸಮಾರಂಭಕ್ಕೆ ಸೂಕ್ತವಾದ ಭಿತ್ತಿ ಪತ್ರದ ಮಾದರಿಯನ್ನು ತಯಾರಿಸಿರಿ.

೨. ನೀವು ತಿಳಿದಿರುವಂತೆ ನವಿಲನ್ನು ಕುರಿತು ೭–೮ ವಾಕ್ಯಗಳಲ್ಲಿ ಬರೆಯಿರಿ.



# ಶಬ್ದಾರ್ಥಕೋಶ

## ಎರಡನೆಯ ಸೆಮಿಸ್ಟರ್

### ಅ

ಅಗತ್ಯ – ಬೇಕಾದ
ಅಂತರ್ಭಾವ – ಒಳಮನಸ್ಸು
ಅನಂತ – ಅಂತ್ಯವಿಲ್ಲದ್ದು
ಅಭಿಮಾನ – ಆತ್ಮಗೌರವ
ಅರಮನೆ – ರಾಜರ ಮನೆ

### ಆ

ಆಸ್ಥಾನ – ರಾಜಸಭೆ
ಆಪ್ತ – ಆತ್ಮೀಯ, ಹತ್ತಿರದ,
ಪ್ರಿಯ – ನೆಚ್ಚಿನ
ಆಶ್ರಯ – ಆಸರೆ, ಆಧಾರ

### ಇ

ಇನಿತಾದರೂ – ಸ್ವಲ್ಪವಾದರೂ

### ಉ

ಉಜ್ವಲ – ಪ್ರಕಾಶಮಾನವಾದ
ಉದ್ಘೋಷಿಸು – ಗಟ್ಟಿಯಾಗಿ ಕೂಗು
ಉರಿ – ಸುಡು, ಜ್ವಾಲೆ

### ಎ

ಎಡರು – ತೊಂದರೆ, ಕಷ್ಟ
ಎದೆಗುಂದು – ಅಧೀರನಾಗು, ಹೆದರು
ಎಂಬೊ – ಎನ್ನುವ

### ಕ

ಕಾದು – ಯುದ್ಧಮಾಡು
ಕಾರ್ಯೋನ್ಮುಖ – ಕೆಲಸದಲ್ಲಿ ನಿರತ
ಕ್ಷಿಪ್ರ – ವೇಗ, ತುರ್ತು
ಕುಶಲತೆ – ನೈಪುಣ್ಯ
ಕೇಂದ್ರೀಕರಿಸು – ಒಂದೇ ಸ್ಥಳದಲ್ಲಿ ನಿಲ್ಲಿಸು
ಕೋವಿ – ಬಂದೂಕು
ಕ್ರೋಧ – ಸಿಟ್ಟು, ಕೋಪ

### ಗ

ಗಣಿತಜ್ಞ – ಗಣಿತ ವಿಷಯದಲ್ಲಿ ಪಾಂಡಿತ್ಯ ಪಡೆದಿರುವವ
ಗುಲ್ಲು – ಗಲಾಟೆ, ಗದ್ದಲ

### ಚ

ಚಿರನಿದ್ರೆ – ಶಾಶ್ವತವಾದ ನಿದ್ರೆ, ಸಾವು
ಚಿಂತನೆ – ಯೋಚನೆ, ಆಲೋಚನೆ

### ಜ

ಜನಜಂಗುಳಿ – ಹೆಚ್ಚು ಜನರಿರುವ ತಾಣ
ಜಾಗರೂಕ – ಎಚ್ಚರ
ಜಿಗಿ – ಹಾರು

### ತ

ತಾಮಸ – ಕತ್ತಲೆ, ಅಜ್ಞಾನ
ತೀರ್ಥ – ಪವಿತ್ರವಾದ ನೀರು
ತೋಚು – ಹೊಳೆ

### ದ

ದನಗಾಹಿ – ದನಗಳನ್ನು ಕಾಯುವವನು
ದ್ವೀಪ – ನಡುಗಡ್ಡೆ, ಸುತ್ತಲೂ ನೀರಿನಿಂದ ಆವೃತವಾದ ಭೂಪ್ರದೇಶ

